

# ಕಲಾಗುರು
# ದಂಡಾವತಿಮಠ

ಕರ್ನಾಟಕ ಲಲಿತಕಲಾ ಅಕಾಡೆಮಿ

ಕರ್ನಾಟಕ ಕಲಾವಿದರು – 1

# ಕಲಾಗುರು ದಂಡಾವತಿಮಠ

ಬಿ. ಕೆ. ಹಿರೇಮಠ

ಕರ್ನಾಟಕ ಲಲಿತಕಲಾ ಅಕಾಡೆಮಿ
ಬೆಂಗಳೂರು

KALAGURU DANDAVATHIMATH : A Biography by Prof. B. K. Hirematha, published by Karnataka Lalitkala Academy, 14/13, Canara Finance Corporation Building, Nrupathunga Road, Bangalore-560 002 Pages : 52

First Impression 1983

Copies : 1000



*General Editor:* S. N. CHANDRASEKHAR

**Price Rs. : 25—00**

Printed by the Brindavan Printers & Publishers, Lalbaugh Fort Road, Bangalore-560 004



ಕಲಾಗುರು ದಂಡಾವತಿಮಠ

ಜನನ - ೧೯೦೦ ಮರಣ - ೧೯೭೮

## ಮೊದಲ ಮಾತು :

ಕರ್ನಾಟಕ ಲಲಿತಕಲಾ ಅಕಾಡೆಮಿಯ ಪ್ರಮುಖ ಯೋಜನೆಗಳಲ್ಲಿ ರಾಜ್ಯದ ಹಿರಿಯ ಕಲಾವಿದರು ಮತ್ತು ಅವರ ಕೃತಿಗಳ ಬಗ್ಗೆ ಪುಸ್ತಕಗಳನ್ನು ಪ್ರಕಟಿಸುವುದು ಒಂದು. ಈ ಪುಸ್ತಕಗಳು ಆ ಹೆಸರಾಂತ ಕಲಾವಿದರ, ಅವರ ಕಲೆಯ ಪರಿಚಯ ಮಾಡುಸುವುದರ ಜೊತೆಗೆ ರಾಜ್ಯದಲ್ಲಿ ಕಲೆಯು ಬೆಳೆದು ಬಂದ ರೀತಿ ಮತ್ತು ಅದರ ಚರಿತ್ರೆಯ ತಿಳುವಳಿಕೆ ಉಂಟುಮಾಡಲು ಸಹಾಯಕವಾಗಲು ಸಾಕು.

ಈ ಯೋಜನೆಯ ಮೊದಲ ಕಂತಿಗೆ ಸರ್ವಶ್ರೀ ಕಲಾಗುರು ದಂಡಾವತಿ ಮಠ, ಡಾ. ಎಂ. ವಿ. ಮಿಣಜಗಿ, ಎನ್. ಜಿ. ಪಾವಂಜೆ, ಕೆ. ವೆಂಕಟಪ್ಪನವರ ಹೆಸರುಗಳನ್ನು ಆರಿಸಲಾಗಿದೆ. ಇನ್ನೂ ಹಲವು ಹಿರಿಯ ಕಲಾವಿದರ ಬಗ್ಗೆ ಪುಸ್ತಕಗಳನ್ನು ಕ್ರಮೇಣವಾಗಿ ಪ್ರಕಟಿಸುವ ಕಾರ್ಯಕ್ರಮವನ್ನು ಶೀಘ್ರವೇ ಪ್ರಕಟಿಸಲಾಗುವುದು.

ಈ ಪುಸ್ತಕಗಳನ್ನು ರಚಿಸಲು ಆರಿಸಿರುವ ಬರಹಗಾರರೂ, ಕಲೆಯ ವಿಷಯವಾಗಿ, ಆಯಾ ಕಲಾವಿದರ ಜೀವನವನ್ನು ಕುರಿತು ಅರಿತವರು. ಇವುಗಳಿಗೆ ಆರಿಸಿರುವ ಚಿತ್ರಗಳೂ, ಆಯಾ ಕಲಾವಿದರ ಕಲ್ಪನಾವಿಲಾಸದ ಪ್ರತೀಕ. ಅವು ಆಯಾ ಕಲಾವಿದರ ಕಲಾಸಂಪತ್ತಿನ ವ್ಯಾಪ್ತಿಯನ್ನು ಅರಿಯಲು ಸಾಧಕವಾಗುವುದರಲ್ಲಿ ಸಂದೇಹವಿಲ್ಲ.

ಈ ಮಾಲೆಯನ್ನು ತಯಾರಿಸುವುದರಲ್ಲಿ ಸಂಪಾದಕತ್ವ ವಹಿಸಿರುವ ಶ್ರೀ ಎಸ್. ಎನ್. ಚಂದ್ರಶೇಖರ್ ಮತ್ತು ಅವರ ಸಮಿತಿಯ ಸದಸ್ಯರಾದ ಸರ್ವಶ್ರೀ ಆರ್. ಎಂ. ಹಡಪದ್, ಪಿ. ಆರ್. ತಿಪ್ಪೇಸ್ವಾಮಿ ಮತ್ತು ಎಂ. ಈ. ಗುರು ಅವರಿಗೂ ಮತ್ತು ಗ್ರಂಥಕರ್ತರಿಗೂ ಅಕಾಡೆಮಿಯ ಪರವಾಗಿ ನನ್ನ ಹೃತ್ಪೂರ್ವಕ ವಂದನೆಗಳು.

ಕಲಾವಿದರು, ಕಲಾರಸಿಕರು ಮತ್ತು ಸಾಹಿತ್ಯಾಭಿಮಾನಿಗಳು ಅಕಡೆಮಿಯ ಈ ಸಾಧನೆಯನ್ನು ಸ್ವಾಗತಿಸುವರೆಂದು ಆಶಿಸೋಣ.

**ಟಿ. ಪಿ. ಅಕ್ಕಿ**
ಅಧ್ಯಕ್ಷ
ಕರ್ನಾಟಕ ಲಲಿತಕಲಾ ಅಕಾಡೆಮಿ

# ಕಲಾಗುರು ದಂಡಾವತಿಮಠ

"Paint the face in such a way that it will be easy to understand what is going on in the mind"

ಜಗತ್ ಪ್ರಸಿದ್ಧ ಕಲಾವಿದ ಲಿಯನಾರ್ದೋ ದ ವಿಂಚಿಯು ಈ ನಾಡಿ ಕಲಾವಿದ ಜಿ. ಎಸ್. ದಂಡಾವತಿಮಠ ಅವರು ಚಿತ್ರಿಸಿದ್ದ "ಕಾಶ್ಮೀರಿ ಭಿಕ್ಷುಕ" ಎಂಬ ಭಾವಚಿತ್ರವನ್ನು ಕಂಡಾಗ ಒಮ್ಮೆಲೇ ನೆನಪಿಗೆ ಬರುತ್ತದೆ. ನೆರಳು–ಬೆಳಕುಗಳ ಉತ್ಕೃಷ್ಟ ಸಂಯೋಜನೆಯನ್ನೊಳಗೊಂಡ ಹದಿ ಹರಿಯದ ಮುಖ, ಮುಖದ ಮೇಲೆ ನೀಳವಾಗಿ ಎದ್ದುಕಾಣುವ ಮೂಗು, ದೀನತೆ-ತುಂಬಿ ತುಳುಕುವ ಕಣ್ಣುಗಳು, ತುಟಿಯ ಮೇಲೆ ಕುಡಿಮೀಸೆ, ಸ್ವಚ್ಛಂದವಾಗಿ ಯಾದರೂ ವಯೋಮಾನಕ್ಕನುಗುಣವಾಗಿ ನವುರು ನವುರಾಗಿ ಬೆಳೆದ ಗಡ್ಡ, ಚಿಂದಿಯಾದ ವೇಷ ಭೂಷಣ,ಮುಖದ ಮತ್ತು ಶರೀರ ರಚನೆಯ ಏಲುಪೈಲು ಗಳನ್ನು ಸ್ಫುಟವಾಗಿ ಕಾಣುವಂತೆ ಕಲಾತ್ಮಕವಾಗಿ ಲೇಪಿಸಿದ ವರ್ಣಗಳು, ಅಂಗಾಂಗಗಳು ಎಷ್ಟು ಸೂಕ್ಷ್ಮವಾಗಿ ಮೂಡಿವೆಯೆಂದರೆ ಆ ಯುವಕನ ತುಟಿಯಂಚಿನಲ್ಲಿ ಬಿದ್ದ ಕುಡಿಮೀಸೆಯ ನೆರಳೂ ಸಹ ಸ್ಪಷ್ಟ. ಎಲ್ಲಕ್ಕಿಂತ ಹೆಚ್ಚಾಗಿ ಚಿತ್ರಿತ ವ್ಯಕ್ತಿಯ ಮನೋಗತವನ್ನು ಅರಿತುಕೊಳ್ಳಬಹುದಾದ ಸಜೀವ ಚಿತ್ರಣ ಇಲ್ಲಿದೆ.

ಇದರಂತೆಯೇ, ಅವರು ಚಿತ್ರಿಸಿದ ರೊದ್ದ ಶ್ರೀನಿವಾಸರಾಯರ ತೈಲ ವರ್ಣದ ಭಾವಚಿತ್ರ, ಡಾ॥ ಏ.ಎಸ್. ಅಡಕೆಯವರ ತೈಲವರ್ಣದ ಭಾವಚಿತ್ರ, ಕೈಯಲ್ಲಿ ಕುಂಚವನ್ನು ಹಿಡಿದು ನಿಂತ ಕಲಾವಿದೆಯ ಭಾವಚಿತ್ರ, ಮಹಾತ್ಮಾ ಗಾಂಧೀಜೀ, ಸರದಾರ ವಲ್ಲಭಬಾಯಿ ಪಟೇಲರ ಭಾವಚಿತ್ರಗಳು ಅಲ್ಲದೆ, ಜಲವರ್ಣದಲ್ಲಿ ಬಿಡಿಸಿದ ತಮ್ಮ ಹಿರಿಯರ ಭಾವಚಿತ್ರಗಳು. ಇಂತಹ ಹಲವಾರು ಭಾವಚಿತ್ರಗಳು ಮೇಲೆ ಹೇಳಿರುವ ವಿವರಣೆಗೆ ಯಥೋಚಿತವಾಗಿ ಒಪ್ಪುವ ಕಲಾಕೃತಿಗಳು. ದಂಡಾವತಿ ಮಠ ಅವರು ಹುಟ್ಟು ಕಲಾವಿದರು, ಶ್ರೇಷ್ಠ ಕಲಾವಿದರು ಎಂಬುದನ್ನು ಸಾರಿ ಹೇಳುತ್ತವೆ.

ವ್ಯಕ್ತಿಯನ್ನು ರೂಪದರ್ಶಿಯಂತೆ ಕೂಡಿಸಿಯೋ ಅಥವಾ ಅವರ ಛಾಯಾ ಚಿತ್ರಗಳನ್ನು ಅನುಸರಿಸಿಯೋ ಭಾವಚಿತ್ರಗಳನ್ನು ಬಿಡಿಸುವುದು ಪದ್ಧತಿ ಆದರೆ ವ್ಯಕ್ತಿಗತಿಸಿಹೋಗಿದ್ದರೆ. ಅವರ ಛಾಯಾಚಿತ್ರಗಳು ಇಲ್ಲದಿದ್ದರೆ ಅಥವಾ ಇದ್ದರೂ ಗುರುತಿಸಲು ಬಾರದಷ್ಟು ನಷ್ಟವಾಗಿದ್ದರೆ, ಅಂಥ ಸಂದರ್ಭಗಳಲ್ಲಿ ಯಾವ ಕಲಾವಿದನೂ ಭಾವಚಿತ್ರಗಳನ್ನು ಬಿಡಿಸಿ ಕೊಡುವ ಗೋಜಿಗೆ ಹೋಗುವುದಿಲ್ಲ. ದಂಡಾವತಿಮಠ ಅವರು ತಮ್ಮ ಇಳಿವಯಸ್ಸಿನಲ್ಲಿ ಕೂಡ ಇಂತಹ ಕಷ್ಟಸಾಧ್ಯವಾದ ಕಾರ್ಯವನ್ನು ಕೈಗೆತ್ತಿಕೊಂಡು ನಿರ್ವಹಿಸಿದ್ದುಂಟು. ಭಾವಚಿತ್ರವನ್ನು ಬರೆಯಿಸಲು ಬಂದ ವ್ಯಕ್ತಿಯೊಬ್ಬರು ಗುರುತಿಸಲು ಸಾಧ್ಯವಾಗದಷ್ಟು ಕೆಟ್ಟುಹೋದ ಛಾಯಾಚಿತ್ರವೊಂದನ್ನು ದಂಡಾವತಿಮಠರ ಕೈಯಲ್ಲಿ ಕೊಡುತ್ತ ತಾವು ಕಂಡಿದ್ದ ಆ ಹೆಣ್ಣುಮಗಳ ಮುಖಚರ್ಯೆಯನ್ನು ಬಣ್ಣಿಸುತ್ತ ಹೋದರಂತೆ. ಅದನ್ನು ತದೇಕ ಚಿತ್ತದಿಂದ ಕೇಳುತ್ತಿದ್ದ ಕಲಾವಿದ ದಂಡಾವತಿಮಠರು ಆ ಹೆಣ್ಣುಮಗಳ ಚಿತ್ರವನ್ನು ಮನದಲ್ಲಿ ಕಲ್ಪಿಸಿಕೊಂಡರಂತೆ. ಅನಂತರ ಅದನ್ನು ಚಿತ್ರಿಸಿ ತೋರಿಸಿದಾಗ ಆ ಹೆಣ್ಣುಮಗಳ ಸಂಬಂಧಿಗಳು "ಆಕೆ ತದ್ರೂಪವಾಗಿ ಹೀಗೇ ಇದ್ದಳು" ಎಂದು ಸಂತೋಷಪಟ್ಟರಂತೆ, ಒಬ್ಬ ಕಲಾವಿದನ ಕಲಾಸಿದ್ಧಿಗೆ ಇದಕ್ಕಿಂತ ಹೆಚ್ಚಿನ ನಿದರ್ಶನ ಬೇಕಾಗಿಲ್ಲ ದಂಡಾವತಿಮಠರು ಕಲಾವಿದರಷ್ಟೇ ಅಲ್ಲ, ಕಲಾ ತಪಸ್ವಿಗಳು.

ವಯಸ್ಸು ಅವರ ಶರೀರದ ಮೇಲೆ ದಾಳಿಯಿಟ್ಟಿತ್ತೇ ಹೊರತು ಅವರ ಕಲಾಸಾಧನೆಗೆ ಅಡ್ಡ ಬರುವ ಧೈರ್ಯ ಅದಕ್ಕಿರಲಿಲ್ಲವೆನ್ನಬೇಕು. ನಿವೃತ್ತಿಯ ನಂತರವೂ ರೇಖೆ ಮೂಡಿಸದೆ, ಬಣ್ಣ ಬಳಿಯದೆ ಅವರ ಜೀವಕ್ಕೆ ಸಮಾಧಾನ ಇರುತ್ತಿರಲಿಲ್ಲ. ಅವರಿಗೆ ಕಲಾದೀಕ್ಷೆಯನ್ನು ಕೊಟ್ಟ ಗುರುಗಳು ಜೀವನದ ಉದ್ದಕ್ಕೂ ನಡೆಸಿಕೊಂಡು ಹೋಗಬೇಕಾದ ಕಲಾವ್ರತವೊಂದನ್ನು ಅನುಗ್ರಹಿಸಿದ್ದರಂತೆ, ತಮ್ಮ ಗುರುಗಳ ಬಗೆಗೆ ಅಭಿಮಾನದಿಂದ ಮಾತನಾಡುತ್ತಿದ್ದಾಗ ದಂಡಾವತಿಮಠರು "ನಮ್ಮ ಗುರುಗಳು ಪ್ರತಿದಿನವೂ ಒಂದಾದರೂ ಕಲಾಕೃತಿಯನ್ನು ರಚಿಸದೆ ಬಿಡುತ್ತಿರಲಿಲ್ಲ. ಕೃತಿ ರಚನೆ ಸಾಧ್ಯವಾಗದಿದ್ದರೆ ಕೊನೆಯಪಕ್ಷ ಒಂದು ರೇಖಾಚಿತ್ರವನ್ನಾದರೂ ಬರೆಯದೆ ಊಟ ಮಾಡುತ್ತಿರಲಿಲ್ಲ. ಅವರು ನನಗೂ ಅದನ್ನೇ ಬೋಧಿಸಿದರು. ಅವರ ಆದೇಶದಂತೆ ನಾನು ಈ ವರೆಗೂ

ಆ ವ್ರತವನ್ನು ತಪ್ಪದೇ ನಡೆಸಿಕೊಂಡು ಬಂದಿದ್ದೇನೆ" ಎಂದು ಹೇಳಿ ತಮ್ಮ ಗುರುಗಳ ಭಾವಚಿತ್ರದ ಕಡೆಗೆ ನೋಡುತ್ತ ಭಾವಪರವಶರಾಗುತ್ತಿದ್ದರು.

ನೈಜವಾಗಿ (Realistic) ಚಿತ್ರಗಳನ್ನು ಬರೆಯುವುದರಲ್ಲಿ, ಅದರಲ್ಲಿಯೂ ಭಾವಚಿತ್ರಗಳನ್ನು (Portraits) ರಚಿಸುವುದರಲ್ಲಿಯೇ ತಮ್ಮ ಕಲಾ ಪ್ರೌಢಿಮೆ, ನೈಪುಣ್ಯವನ್ನು ತೋರಿಸುವುದು ಅಂದಿನ ದಶಕಗಳ ಯುಗಧರ್ಮವಾಗಿತ್ತು. ಕಲಾವಿದ ದಂಡಾವತಿಮಠರು ಇದಕ್ಕೆ ಹೊರತಾಗಿರಲಿಲ್ಲ, ಅಂತೆಯೇ ಅವರ ಕಲಾಪ್ರತಿಭೆಯನ್ನು ಗವನಿಸಲು ಅವರು ರಚಿಸಿದ ಭಾವಚಿತ್ರಗಳೇ ಸಾಧನ.

ದಂಡಾವತಿಮಠರು ಜನ್ಮತಃ ಕಲಾವಿದರೆಂಬುದನ್ನು ಅವರು ವಿದ್ಯಾರ್ಥಿ ದೆಸೆಯಲ್ಲಿದ್ದಾಗ ಗಳಿಸಿದ ಕೀರ್ತಿಯಿಂದಲೇ ಕಂಡುಕೊಳ್ಳಬಹುದು. ಉಚ್ಚ ಕಲಾಪರೀಕ್ಷೆಗಳಲ್ಲಿ ಉತ್ತಮ ಶ್ರೇಣಿಯಲ್ಲಿ ತೇರ್ಗಡೆಹೊಂದಿ ಸ್ಮರಣ ಚಿತ್ರದಲ್ಲಿ ಪ್ರಾವಿಣ್ಯ ಪಾರಿತೋಷಕ ಪಡೆದರು. ೧೯೨೩ ರಲ್ಲಿ ಇವರ ಜಲವರ್ಣದ ಚಿತ್ರವೊಂದಕ್ಕೆ ಮುಂಬೈ ಆರ್ಟ್ ಸೊಸೈಟಿಯವರು ಪ್ರಥಮ ಬಹುಮಾನವನ್ನು ಕೊಡಮಾಡಿದರು. ೧೯೨೮ ಮತ್ತು ೧೯೨೯ರಲ್ಲಿ ಕ್ರಮವಾಗಿ ಮದ್ರಾಸ್ ಮತ್ತು ಮುಂಬೈಯ ಆರ್ಟ್ ಸೊಸೈಟಿಯವರು ಇವರ ಬಳಪದ (Pastel) ವರ್ಣ ಚಿತ್ರವೊಂದಕ್ಕೆ ಪಾರಿತೋಷಕ ಕೊಟ್ಟು ಪುರಸ್ಕರಿಸಿದರು. ಕನ್ನಡ ಸಾಹಿತ್ಯ ಸಮ್ಮೇಳನವು ಸುಮಾರು ಇದೇ ಸಂದರ್ಭದಲ್ಲಿ ಏರ್ಪಡಿಸಿದ ಚಿತ್ರಕಲಾ ಪ್ರದರ್ಶನದಲ್ಲಿ ಇವರು ಸುವರ್ಣ ಪದಕವನ್ನು ಪಡೆದುದನ್ನೂ ಸ್ಮರಿಸಬಹುದು.

ಇನ್ನೊಂದು ಪ್ರಸಂಗ. ಆಗ ಸರ್. ಜೆ.ಜೆ. ಸ್ಕೂಲ್ ಆಫ್ ಆರ್ಟ್ಸ್‌ನ ನಿರ್ದೇಶಕರಾಗಿದ್ದ ಕ್ಯಾಪ್ಟನ್ ಗ್ಲಾಡಸ್ಟನ್ ಸಾಲೋಮನ್ ಅವರು ಹಲವಾರು ವಿದ್ಯಾರ್ಥಿಗಳೊಡನೆ ಉದಯಪುರದ ಪ್ರವಾಸಕ್ಕೆ ಹೋಗಿದ್ದರು. ದಂಡಾವತಿ ಮಠರು ಅವರಲ್ಲಿ ಒಬ್ಬ ವಿದ್ಯಾರ್ಥಿ. ನಿಸರ್ಗ ಚಿತ್ರಣಕ್ಕಾಗಿ ಹೋಗಿದ್ದ ಈ ತಂಡದಲ್ಲಿ ಒಳ್ಳೆಯ ಸ್ಪರ್ಧಾತ್ಮಕ ಮನೋಭಾವದಿಂದ ತಮ್ಮ ಇಚ್ಛಾನುಸಾರ

ಸ್ಥಳದ ಆಯ್ಕೆ ಮಾಡಿಕೊಂಡು ಚಿತ್ರಗಳನ್ನು ರಚಿಸುವಂತೆ ನಿರ್ದೇಶಿಸಲಾಗಿತ್ತು. ದಂಡಾವತಿಮಠರು ಉದಯಪುರದ ಅರಮನೆಯನ್ನು ಹಿನ್ನೆಲೆಯಾಗಿಟ್ಟು ಅದರ ಸಮೀಪದಲ್ಲಿರುವ ಆಲದ ಮರದ ದೃಶ್ಯವನ್ನು ರಚಿಸಿದರು. ಎಲ್ಲ ವಿದ್ಯಾರ್ಥಿಗಳ ನಿಸರ್ಗ ಚಿತ್ರಗಳನ್ನು ಸಾಲಾಗಿ ಇರಿಸಲಾಗಿತ್ತು. ಕ್ಯಾಪ್ಟನ್ ಸಾಲೋಮನ್‌ರು ಒಂದೊಂದೇ ಚಿತ್ರವನ್ನು ಪರಿಶೀಲಿಸುತ್ತ ಬಂದಾಗ ದಂಡಾವತಿಮಠರ ಕಲಾಕೃತಿ ಅವರ ಗಮನ ಸೆಳೆಯಿತು. ನಿಸರ್ಗ ಚಿತ್ರಣದ ಮೂಲಭೂತವಾದ ತತ್ವಗಳನ್ನು ಲಕ್ಷ್ಯದಲ್ಲಿಟ್ಟುಕೊಂಡು ಚಿತ್ರ ಬಿಡಿಸುವುದು ರೂಢಿ. ಆದರೆ, ಅದರೊಟ್ಟಿಗೆ ಅರ್ಥವತ್ತತೆಯನ್ನು ತುಂಬಬಲ್ಲ ಕಲಾವಿದನಲ್ಲಿರಬೇಕಾದ ಕಲ್ಪನಾ ಸಾಮರ್ಥ್ಯ ದಂಡವತಿಮಠರಲ್ಲಿ ಕಂಡಿತು. ಅಂತೆಯೇ ತಮ್ಮ ಪ್ರತಿಭಾಪೂರ್ಣವಾದ ಕುಂಚದ ಮೋಡಿಯಿಂದ ಎಂಥವರ ಹೃದಯವನ್ನೂ ಸೂರೆಗೊಳ್ಳಬಲ್ಲವರಾಗಿದ್ದರು. ಇಂಥವರ ಕಲಾಪ್ರತಿಭೆಯನ್ನು ಕಂಡು ಕ್ಯಾಪ್ಟನ್ ಸಾಲೋಮನ್‌ರು ಆನಂದಿತರಾದ್ದರಲ್ಲಿ ಅಚ್ಚರಿಯೇನು !

ಹಳ್ಳಿ ಹಳ್ಳಿಗಳನ್ನು ಸುತ್ತಾಡಿ ಮೈಲಿ ಚುಚ್ಚುವವನಾಗಿ ತೀರ ಸಾಮಾನ್ಯ ಜೀವನವನ್ನು ಸಾಗಿಸ ಬೇಕಾಗಿದ್ದ ವ್ಯಕ್ತಿಯೊಬ್ಬರು ಮುಂಬೈನಂತಹ ಪಟ್ಟಣಕ್ಕೆ ಹೋಗಿ ಹೋರಾಟದ ಜೀವನ ನಡೆಸಿ, ಕಲಾದೇವಿಯ ಅನುಗ್ರಹವನ್ನು ಸಂಪಾದಿಸಿ, ಚಿತ್ರಿಸಲು ಎತ್ತಿದ ಕುಂಚವನ್ನು ಕೊನೆಯುಸಿರಿನವರೆಗೂ ಕೆಳಗಿಡದೆ ಅಪ್ರತಿಮ ಕಲಾವಿದನ ವ್ಯಕ್ತಿತ್ವವನ್ನು ಸಾಧಿಸಿದ್ದು ಸಣ್ಣ ಮಾತೇನಲ್ಲ. ಅಂದು, ತನ್ನ ಮಟ್ಟಿಗೆ ತಾನು ವಿದ್ಯೆಯನ್ನು ಕಲಿತು ಜೀವನೋಪಾಯಕ್ಕೊಂದು ಹಾದಿಯನ್ನು ಕಂಡು-ಕೊಂಡು ಮುಂಬೈಯಿಂದ ಮರಳಿ ಬಂದರೆ ಅದರಷ್ಟಕ್ಕೆ ಅದೇ ದೊಡ್ಡ ಸಾಹಸವಾಗುತ್ತಿತ್ತು. ಅಂತಹುದರಲ್ಲಿ ಬಡತನ. ಪ್ರತಿಕೂಲಗಳು ಕಾಲು ಹಿಡಿದು ಹಿಂದಕ್ಕೆ ಜಗ್ಗುತ್ತಿರುವಾಗ ಮುಂಬೈಯಲ್ಲಿ ನಿಂತು. ವಿದ್ಯಾರ್ಥಿ ದೆಸೆಯಲ್ಲಿಯೇ ಕಲಾವಿದರೆಂದು ಪ್ರಖ್ಯಾತರಾಗಿ ಒಂದು ಕಲಾ ಸಂಸ್ಥೆಯನ್ನು ಕಟ್ಟಿದರು. ಹೆಸರಿಗೆ ಮಾತ್ರ ಒಂದು ಸಂಸ್ಥೆಯಲ್ಲ. ಅಂದಿನ ಶ್ರೇಷ್ಠ ಕಲಾಶಾಲೆಗೆ ಸಮನಾಗಿ ನಿಲ್ಲಬಲ್ಲ ಕಲಾ ಶಾಲೆಯನ್ನು ಕಟ್ಟಿದರು. ಇದನ್ನು ನೆನೆದಾಗ ದಂಡಾವತಿಮಠರು ಸಾಮಾನ್ಯ ವ್ಯಕ್ತಿಯಾಗಿರಲಿಲ್ಲ : ಅವ

ರೊಬ್ಬ ಅಭಿಜಾತ ಕಲಾವಿದ, ಅಪೂರ್ವ ಕಲಾಶಕ್ತಿ ಎಂದು ಮಾನ್ಯ ಮಾಡಲೇ ಬೇಕಾಗುವುದು.

**ಸಾಧಕ :**

"ಕಲಾಗುರು" ಎಂದು ಪ್ರಖ್ಯಾತರಾದ ದಂಡಾವತಿಮಠ ಅವರ ಹೆಸರು ಗಂಗಾಧರಯ್ಯ, ಅವರ ತಂದೆ ಶಂಕರಯ್ಯ, ತಾಯಿ ಗಂಗಾಬಾಯಿ. ಶಂಕರಯ್ಯನವರದು ಬೈಲಹೊಂಗಲದಲ್ಲಿ ಗೌರವದಿಂದ ಬಾಳಿದ ಸುಸಂಸ್ಕೃತ- ಜಂಗಮ ಮನೆತನ. ದೈವ ಭಕ್ತಿ' ಧರ್ಮ ನಿಷ್ಠೆ, ಸಾತ್ವಿಕ ಜೀವನ- ಇವುಗಳೇ ಆ ಮನೆತನದ ಸಂಪತ್ತು. ಈ ಮನೆತನದಲ್ಲಿ ೧೯೦೦ ನೆಯ ಇಸ್ವಿಯ ಆಗಸ್ಟ ತಿಂಗಳ ೨೧ ನೆಯ ದಿವಸ ಜನ್ಮ ತಳೆದ ಗಂಡು ಮಗುವೆ ಗಂಗಾಧರಯ್ಯ.

ಮನೆಯಲ್ಲಿ. ತಾಯಿ ಗಂಗಾಬಾಯಿಯವರು ಹಬ್ಬ, ಹುಣ್ಣಿಮೆಯ ವಿಶೇಷ ಸಂದರ್ಭಗಳಲ್ಲಿ ಬಸವಣ್ಣ, ಗೌರಿ, ಗಣೇಶ ಮುಂತಾದ ಮೂರ್ತಿಗಳನ್ನು ಆಸ್ಥೆಯಿಂದ ತಮ್ಮ ಕೈಯಾರೆ ತಯಾರಿಸುತ್ತಿದ್ದರು. ಇದು ಗಂಗಾಧರಯ್ಯನವರಲ್ಲಿ ರಕ್ತಗತವಾಗಿ ಬಂದ ಸುಪ್ತ ಪ್ರತಿಭೆಯನ್ನು ಎಚ್ಚರಿಸಿರಬೇಕು. ಬಾಲ್ಯದಿಂದಲೂ ಅವರೂ ಮಣ್ಣಿನ ಮೂರ್ತಿಗಳನ್ನು ಮಾಡುತ್ತಿದ್ದರು, ಚಿತ್ರಗಳನ್ನು ಬರೆಯುತ್ತಿದ್ದರು. ಇನ್ನು, ಶಿಕ್ಷಣವೋ ಇದ್ದ ಊರಲ್ಲಿಯೇ ಆರಂಭ. ಪ್ರಾಥಮಿಕ- ಶಿಕ್ಷಣ ಮುಗಿಯುತ್ತಿದ್ದಂತೆ. ಮಾಧ್ಯಮಿಕ-ಶಿಕ್ಷಣವನ್ನು ಪಡೆಯಲು ಧಾರವಾಡಕ್ಕೆ ಪ್ರಯಾಣ. ಆದರೆ ಅದು ಅರ್ಧಕ್ಕೆ ನಿಂತು ಹೋಯಿತು. ಹೆಚ್ಚಿನ ಶಾಲಾ ಶಿಕ್ಷಣವನ್ನೇ ಆಗಲಿ, ಕಲಾ ಶಿಕ್ಷಣವನ್ನೇ ಆಗಲಿ ಕೊಡಿಸುವ ಶಕ್ತಿ ತಂದೆ ತಾಯಿಗಳಿಗಿರಲಿಲ್ಲ. ಮುಖ್ಯವಾಗಿ ಜೀಸಾಯವನ್ನೇ ಅವಲಂಭಿಸಿದ್ದ ಈ ಕುಟುಂಬವು ಮಗ ಗಂಗಾಧರಯ್ಯನ ಉನ್ನತ ವಿಧ್ಯಾಭ್ಯಾಸದ ಬಗೆಗೆ ಕನಸು ಕೂಡ ಕಾಣುವಂತಿರಲಿಲ್ಲ. ಕಾರಣ ಯಾವುದಾದರೊಂದು ನೌಕರಿಯನ್ನು ಹುಡುಕಿಕೊಂಡು ಹಳ್ಳಿ ಹಳ್ಳಿಗಳನ್ನು ಸುತ್ತಿ ಮೈಲಿ ಚುಚ್ಚುವ ( vaccinator ) ಸರಕಾರಿ ನೌಕರಿಯೊಂದನ್ನು ಪಡೆದರು.

ಸಿಕ್ಕ ನೌಕರಿ ನೀರಸವಾಗಿತ್ತು. ಅವರಲ್ಲಿ ಸುಪ್ತವಾಗಿದ್ದ ಕಲಾ ಪ್ರತಿಭೆ ಆಗಾಗ ಎಚ್ಚತ್ತು ಆ ನೀರವತೆಯನ್ನು ನಿವಾರಿಸಿ ಆನಂದದ ಹೊಸಲು

ಹರಿಯುವಂತೆ ಮಾಡುತ್ತಿತ್ತು. ತಮ್ಮ ಪಾಲಿನ ಕರ್ತವ್ಯವನ್ನು ನಿರ್ವಹಿಸಿದ ನಂತರ ಉಳಿದ ಸಮಯದಲ್ಲೆಲ್ಲ ಗಂಗಾಧರಯ್ಯನವರಿಗೆ ಚಿತ್ರ ಬರೆಯುವುದೇ ಕೆಲಸ. ಬರೆದ ಚಿತ್ರಗಳೇನೋ ರಾಶಿಯಾದುವು. ಅವುಗಳನ್ನು ನೋಡಿ ಸರಿ-ತಪ್ಪುಗಳನ್ನು ತಿಳಿಸಿ ಕೊಟ್ಟು ಮುಂದೆ ಮಾರ್ಗದರ್ಶನ ನೀಡುವರು ಯಾರೂ ಇರಲಿಲ್ಲ. ತಮ್ಮ ಚಿತ್ರಗಳನ್ನು ಬಲ್ಲವರಿಗೆ ತೋರಿಸ ಬೇಕೆಂಬ ಕುತೂಹಲ ಕಾಡುತ್ತಿತ್ತು. ಅದೇ ಸಮಯದಲ್ಲಿ ಇವರ ರೇಖಾ ಚಿತ್ರಗಳನ್ನು ಕಂಡ ಪ್ರತಿಷ್ಠಿತರೊಬ್ಬರು ಧಾರವಾಡದ ಸರಕಾರಿ ಮಾಧ್ಯಮಿಕ ಶಾಲೆಯಲ್ಲಿ ಕಲಾ ಶಿಕ್ಷಕರಾಗಿದ್ದ ಎನ್. ಎಂ. ನೆರ್ಲೆಕರ ಅವರನ್ನು ಕಾಣುವಂತೆ-ಸಲಹೆ ಮಾಡಿದರು. ಯಾವುದೇ ಕಲಾ ಶಿಕ್ಷಣವಿಲ್ಲದೇ ತಮ್ಮ ಚಿತ್ರಗಳನ್ನು ಒಬ್ಬ ಹೆಸರಾಂತ ಕಲಾಶಿಕ್ಷಕರಿಗೆ ತೋರಿಸಬೇಕೆಂದರೆ ಎಲ್ಲಿಲ್ಲದ ಸಂಕೋಚ ಗಂಗಾದರಯ್ಯನವರಿಗೆ. ಅಳುಕುತ್ತಲೇ ನೆರ್ಲೆಕರರನ್ನು ಕಂಡ ಗಂಗಾಧರಯ್ಯನವರು ತಾವು ರಚಿಸಿದ ಎಲ್ಲ ಚಿತ್ರಗಳನ್ನು ತೋರಿಸಿದರು. ನೆರ್ಲೆಕರರು "ನೀನು ಯಾವುದಾದರೂ ಕಲಾ ಪರೀಕ್ಷೆಯನ್ನು ಪಾಸು ಮಾಡಿರುವೆಯಾ ?" ಎಂದು ಕೇಳಿದರು. "ಇಲ್ಲ" ಎಂಬ ಇವರ ಉತ್ತರವು ಅಚ್ಚರಿಯನ್ನುಂಟು ಮಾಡಿತು. ತಮ್ಮ ಕಣ್ಮುಂದಿರುವ ಚಿತ್ರಗಳ ನೈಪುಣ್ಯವಾದರೋ ಸಂತೋಷವನ್ನು ಉಕ್ಕಿಸಿತ್ತು. ಶ್ರೇಷ್ಠ ಕಲಾವಿದನಾಗುವ ಭವಿಷ್ಯದ ಸುಳಿವನ್ನು. ಕಲಾಕ್ಷೇತ್ರದಲ್ಲಿ ಮೆರೆಯಬಲ್ಲ ಸಾಮರ್ಥ್ಯವನ್ನು ಗಂಗಾಧರಯ್ಯನವರಲ್ಲಿ ಅವರು ಕಂಡಿರಬೇಕು. ಅದಕ್ಕಾಗಿಯೇ "ನಿಮ್ಮ ಕೆಲಸ ಚಿತ್ರಕಲೆಯದು, ಈ ಹುದ್ದೆಯನ್ನು ನೀವು ಕೂಡಲೇ ಬಿಡಬೇಕು. ಇಲ್ಲವಾದಲ್ಲಿ ನಿಮ್ಮನ್ನು ನೀವೇ ವಂಚಿಸಿದಂತೆ." ಎಂದು ಖಚಿತವಾಗಿ ನೆರ್ಲೆಕರರು ಹೇಳಿದರು. ಹುದುಗಿದ್ದ ಅಪಾರ ಕಲಾ ಶಕ್ತಿಯನ್ನು ಗುರುತಿಸಿ ನುಡಿದ ಆ ಕಲಾ ಶಿಕ್ಷಕರ ಮಾತು ದಂಡಾವತಿಮಠರ ಜೀವನದ ಗತಿಯನ್ನೇ ಬದಲಿಸಲು ಕಾರಣವಾಯಿತು.

ಒಂದೆಡೆ ತಮ್ಮಲ್ಲಿಯ ಕಲಾಪ್ರತಿಭೆಯ ಬಗೆಗೆ ಎಚ್ಚರ ಮೂಡಿಸಿದ ವ್ಯಕ್ತಿಯ ಬಗೆಗೆ ಗೌರವ-ಅಭಿಮಾನಗಳು ಗರಿಗೆದರಿ ನಿಂತರೆ, ಇನ್ನೊಂದೆಡೆ "ನೀನು ಕಲೆಗಾಗಿ ಮೀಸಲಾದವನು" ಎಂಬುದಾಗಿ ಹೇಳಿದ ಕಲಾಶಿಕ್ಷಕರ ಮಾತು ಅಂತರಂಗವನ್ನೆಲ್ಲ ತುಂಬಿ ಪ್ರತಿಧ್ವನಿಸುತ್ತಿತ್ತು. ಗಂಗಾಧರಯ್ಯ ತಕ್ಷಣ ವ್ಯಾಕ್ಸಿ

ನೇಟರ ಹುದ್ದೆಯನ್ನು ಬಿಟ್ಟರು. ತಮ್ಮಲ್ಲಿ ಪ್ರಜ್ವಲಿಸುತ್ತಿದ್ದ ಕಲಾಪ್ರತಿಭೆಯ ಬೆನ್ನು ಹತ್ತಿದರು. ನೆರ್ಲೆಕರರ ಸಲಹೆಯಂತೆ ಡ್ರಾಯಿಂಗ್ ಗ್ರೇಡ್ ಪರೀಕ್ಷೆಗಳಿಗೆ ಕುಳಿತು ಉತ್ತೀರ್ಣರಾದರು. ಮೊದಲೆ ಬಲಾಢ್ಯನಾದವನಿಗೆ ಕುಸ್ತಿಯ ಡಾವುಪೇಚುಗಳನ್ನು (ಪೆಟ್ಟು) ಕಲಿಸಿಕೊಟ್ಟಂತಾಯಿತು; ಚಿನ್ನಕ್ಕೆ ಕುಂದಣವಿಟ್ಟಂತಾಯಿತು. ಗಂಗಾಧರಯ್ಯರಲ್ಲಿ ಕಲೆಯ ಹಸಿವು ತೀವ್ರವಾಗಿ ಕಲೆಯಲ್ಲಿ ಉನ್ನತ ಶಿಕ್ಷಣವನ್ನು ಪಡೆಯಬೇಕೆಂಬ ಅಭಿಲಾಷೆ ಬಲವತ್ತರವಾಯಿತು. ಅಂದು, ಉನ್ನತ ಕಲಾಶಿಕ್ಷಣಕ್ಕೆ ಮುಂಬಯಿಯ ಕಲಾಶಾಲೆಯನ್ನು ಆಶ್ರಯಿಸಬೇಕಾಗಿತ್ತು. ಇದ್ದ ನೌಕರಿಯನ್ನು ಬಿಟ್ಟ ದಂಡಾವತಿಮಠರನ್ನು ಮುಂಬಯಿಗೆ ಕಳಿಸಿಕೊಡುವವರಾದರೂ ಯಾರು ? ತಂದೆ-ತಾಯಿಗಳಿಗಂತೂ ಸಾಧ್ಯವಿರಲಿಲ್ಲ. ಆದರೂ ಅವರಲ್ಲಿ ಹೊತ್ತಿಕೊಂಡ ಕಲಾಪ್ರತಿಭಾಜ್ವಾಲೆ ನಂದಲಿಲ್ಲ.

ಈ ಹೊಯ್ದಾಟದಲ್ಲಿರುವಾಗಲೇ ಅವರ ಸೋದರಮಾವ ಕುಲಕರ್ಣಿಯವರು ಗಂಗಾಧರಯ್ಯನವರಿಗೆ ತಮ್ಮ ಮಗಳನ್ನು ಕೊಟ್ಟು ಲಗ್ನ ಮಾಡುವುದಾಗಿಯೂ, ಮುಂದೆ ಕಲಿಯುವುದಕ್ಕೆ ಸಹಾಯ ಮಾಡುವುದಾಗಿಯೂ ಭರವಸೆ ಕೊಟ್ಟರು. ಇದು ಗಂಗಾಧರಯ್ಯನವರ ಆಶೆಗೆ ಪುಟನೀಡಿತು. ಮುಂಬಯಿಯ ಸರ್.ಜೆ.ಜೆ.ಸ್ಕೂಲ್ ಆಫ್ ಆರ್ಟ್ಸ್‌ನ ಸೇರಿದರು.ಬ್ರಿಟಿಶ್ ಅಧಿಕಾರಿಗಳ ಅಚ್ಚುಕಟ್ಟಾದ ಆಡಳಿತ ವ್ಯವಸ್ಥೆಯನ್ನು ಹೊಂದಿದ ಈ ಕಲಾಶಾಲೆಯಲ್ಲಿ ಭಾರತದ ಪ್ರಖ್ಯಾತ ಕಲಾವಿದರು ಶಿಕ್ಷಕರಾಗಿದ್ದರು. ಕಲಾಶಾಲೆಯ ಸೂಕ್ತ ವಾತಾವರಣ ಮತ್ತು ಕಲೆಗಾಗಿ ತಮ್ಮನ್ನು ಅರ್ಪಿಸಿಕೊಂಡ ಶಿಕ್ಷಕರ ಆದರ್ಶಗಳು ದಂಡಾವತಿಮಠರ ಮೇಲೆ ಅಚ್ಚಳಿಯದ ಪ್ರಭಾವವನ್ನು ಬೀರಿದವು ಸುಪ್ತವಾಗಿದ್ದ ಕಲೆ ಸೆಲೆಯೊಡೆಯಿತು. ೧೯೨೮ ರಲ್ಲಿ ಡ್ರಾಯಿಂಗ್ ಟೀಚರ್ಸ್ ಸರ್ಟಿಫಿಕೇಟ್ ಪರೀಕ್ಷೆಯಲ್ಲಿ ಉತ್ತಮ ದರ್ಜೆಯಲ್ಲಿ ಪಾಸಾದರು. ಅದೇ ವರ್ಷ ಮದುವೆಯೂ ಆಯಿತು. ಆದರೆ ಮುಂದೆ ಒಂದು ವರ್ಷದಲ್ಲಿ ಹೆಂಡತಿ ಶಿವಾಧೀನರಾದರು. ಮುಂದೆ ಸೋದರ ಮಾವನ ಸಹಾಯವೂ ದೊರಕದಾಯಿತು. ಮುಂಬೈಯಂತಹ ಪಟ್ಟಣದಲ್ಲಿ ದುಡ್ಡಿಲ್ಲದೆ ಇರುವುದಾದರೂ ಹೇಗೆ? ತಂದೆ-ತಾಯಿಗಳಾದರೋ ತಿರುಗಿ ಊರಿಗೆ ಬರುವಂತೆ ಹೇಳುತ್ತಿದ್ದರು. ದಂಡಾವತಿಮಠರ

ಮನಸ್ಸು ಮಾತ್ರ ಸಾಧಿಸಲು ಬಾರದುದನ್ನು ಪಡೆಯದೆ ಹಿಂದಿರುಗಲು ಒಪ್ಪ ಲಿಲ್ಲ. ಅವರ ಈ ಗುಣ ವಿಶೇಷವೇ ಅವರ ಜೀವನದ ಯಶಸ್ಸಿಗೆ ಬಹುಮಟ್ಟಿಗೆ ಕಾರಣವಾಗಿತ್ತು. ಮುಂಬೈಯಲ್ಲಿ ಅಡ್ಡಾಡಿ ಫೋಟೋಗ್ರಾಫರುಗಳನ್ನು, ಚೌಕಟ್ಟು ಹಾಕುವವರನ್ನು ಕಂಡರು. ಅವರು ಕೊಟ್ಟ ಕೆಲಸವನ್ನು ಪೂರೈಸಿ ದರು. ಬಂದ ಸ್ವಲ್ಪ ದುಡ್ಡಿನಿಂದಲೇ ಕಲಾ ಅಧ್ಯಯನವನ್ನು ಮುಂದುವರಿ ಸಿದರು.

ಈ ಸಂದರ್ಭದಲ್ಲಿ ಬಿಳೂರು ಮಹಾಸ್ವಾಮಿಗಳ ಆದೇಶದಂತೆ ದಂಡಾವತಿ ಮಠರಿಗೆ ನೆರವು ನೀಡಿದವರು. ಮುಂಬೈನಲ್ಲಿ ದಳ್ಳಾಳಿ ಅಂಗಡಿಯೊಂದರ ಮಾಲೀಕ, ರಬಕವಿಯ ಗಂಗಾಧರಪ್ಪ ಸಾಬೋಜಿ. ಇಷ್ಟಾದರೂ ದಾರಿ ಸುಗಮವಾಗಿರಲಿಲ್ಲ. ಕಲಾ ಪರೀಕ್ಷೆಗಳಲ್ಲಿ ಯಶಸ್ಸು ಗಳಿಸುತ್ತಿದ್ದರೂ ಜೀವಕ್ಕೆ ಸಮಾಧಾನ ಉಳಿಯಲಿಲ್ಲ. ಒಂದೆರಡು ವರ್ಷದ ಅವಧಿಯಲ್ಲಿ ತಂದೆ-ತಾಯಿ ಳಗು ಶಿವಾಧೀನರಾದ ಘಟನೆ ದಂಡಾವತಿಮಠರಿಗೆ ಆಘಾತವಾಯಿತು. ಪ್ರತಿಫ ಪರಿಶ್ರಮಗಳ ಒಕ್ಕಲು ದಂಡಾವತಿಮಠ. ಆದರೂ ಪ್ರತಿಕೂಲ ಪರಿಸ್ಥಿತಿ ಅವ ರನ್ನು ಮುಂಬೈನಿಂದ ಹುಟ್ಟೂರಿಗೆ ಎಳೆದು ತಂದಿತು: ಸ್ವಲ್ಪ ಕಾಲ ಬಳಲು ವಂತೆ ಮಾಡಿತು.

ಮುಂದೆ ಹಿರಿಯರನೇಕರ ಬೆಂಬಲ, ಪ್ರೋತ್ಸಾಹವನ್ನು ಹೊತ್ತು ಮುಂಬೈಗೆ ಮರಳಿದರು. ಕುಂದದ ಉತ್ಸಾಹದಿಂದ ಮತ್ತೆ ಕಲಾಧ್ಯಯನಕ್ಕೆ ನಿಂತರು. ೧೯೩೧ ರಲ್ಲಿ ಕಲಾ ಅಧ್ಯಯನದ ಉನ್ನತವಾದ ಡಿಪ್ಲೋಮಾ ಪದವಿ ಯನ್ನು ಪ್ರಥಮ ಶ್ರೇಣಿಯಲ್ಲಿ ಪಡೆದರು. ಅವರ ಹೋರಾಟದ ಬದುಕು ಕೊನೆಗೆ ತನ್ನ ಗುರಿಯನ್ನು ಮುಟ್ಟಿತ್ತು. ವಿದ್ಯಾರ್ಥಿ ಜೀವನದುದ್ದಕ್ಕೂ ಪಟ್ಟ ಪರಿಶ್ರಮದಿಂದ ಮತ್ತೆ ಮತ್ತೆ ಎದುರಾಗುತ್ತಿದ್ದ ಬದುಕಿನ ಆಘಾತಗಳು ಅವ ರನ್ನು ಹಿಮ್ಮೆಟ್ಟಿಸಲು ಸಮರ್ಥವಾಗಲಿಲ್ಲ. ಬದಲಾಗಿ, ಅವರ ಜೀವನಕ್ಕೆ ಘನತೆಯನ್ನು, ಗಟ್ಟಿತನವನ್ನು ತಂದುಕೊಟ್ಟವು. ಅಲ್ಲದೆ, ಎಂಥ ಪರಿಸ್ಥಿತಿ ಯನ್ನೂ ಎದುರಿಸುವ, ಗೆಲ್ಲುವ ಆತ್ಮ ವಿಶ್ವಾಸವನ್ನು ಮೂಡಿಸಿದವು. ಅಂದು ಗಳಿಸಿದ ಆತ್ಮಶ್ರೀಯನ್ನು ದಂಡಾವತಿಮಠರು ತಮ್ಮ ಬಾಳಿನ ಕೊನೆಯವರೆಗೂ

ಕಳೆದುಕೊಳ್ಳಲಿಲ್ಲ. ಅಷ್ಟೇ ಏಕೆ ತಮ್ಮೊಡನೆ ಸಂಪರ್ಕ ಹೊಂದಿದವರಲ್ಲಿ ಸಹ ಆತ್ಮ ವಿಶ್ವಾಸವನ್ನು ಹುಟ್ಟಿಸಿದರು; ಅವರಲ್ಲಿಯೂ ಆತ್ಮಶ್ರೀ ಬೆಳಗುವಂತೆ ಮಾಡಿದರು.

## ಗುರು : ಕಲಾವಿದ

ಜ್ಞಾನಕ್ಕಾಗಿ ಸದಾ ಹಂಬಲಿಸುವ ನಿರುತ್ಸಾಹವನ್ನು ಅರಿಯದ ಮನಸ್ಸು ಗುರುವಾದವನಿಗೆ ಅಗತ್ಯ, ಬಿಂಕ-ಅಹಂಕಾರಗಳು ಗುರು ಚೈತನ್ಯಕ್ಕೆ ಹೊರತಾದ ಗುಣಗಳು, ಸಚ್ಚಾರಿತ್ರ್ಯ, ಆತ್ಮೀಯತೆ, ವಾತ್ಸಲ್ಯಗಳು ವ್ಯಕ್ತಿಯಲ್ಲಿ "ಗುರುತ್ವ" ವನ್ನು ತುಂಬುವ ಗುಣಗಳು. ಇಂತಹ ಗುಣ ವಿಶೇಷಗಳ ಮೂರ್ತಿಸ್ವರೂಪ ದಂಡಾವತಿಮಠ. ನಡೆ-ನುಡಿಗಳು ಒಂದಾಗಿ ಶುದ್ಧ ಕಲಾಕಾಯಕದಿಂದ ಜೀವನ ಸಾರ್ಥಕತೆಯನ್ನು ಪಡೆದವರು. ಕಲಾವಿದ ಎಂದಾಗ ಯಾವಾವುದೋ ಚಟಗಳುಳ್ಳ, ವಿಚಿತ್ರ ವರ್ತನೆಯ, ಅವ್ಯವಸ್ಥ ಜೀವನವನ್ನು ನಡೆಸುವ ಒಬ್ಬ ವ್ಯಕ್ತಿ ಎಂಬ ಭಾವನೆ ಮೂಡಿಬರುತ್ತಿದ್ದರೆ ದಂಡಾವತಿಮಠರಿಂದ ಅಂತಹ ಭಾವನೆಗಳೆಲ್ಲ ಬದಲಾಗಿ ಹೋಗುತ್ತಿದ್ದವು. ಸದಾಚಾರದ ಮೃದು ಸ್ವಭಾವ, ಮತ್ಸರ ರಹಿತ ಸಹಜ ಪ್ರೀತಿ, ವಾತ್ಸಲ್ಯಗಳು, ಸದಾ ತೆರೆದಿಟ್ಟ ವಿಶಾಲವಾದ ಮನಸ್ಸು, ಚಿಲುಮೆಯಂತೆ ಸದಾ ಪುಟಿಯುತ್ತಿದ್ದ ಉತ್ಸಾಹ, ಇದ್ದುದರಲ್ಲಿ ಚೊಕ್ಕವಾಗಿ ಜೀವಿಸುವ ರೀತಿ-ಹೀಗೆ ನೋಡಿ, ಅರಿತು ಕಲಿಯಬೇಕೆನ್ನುವ ಶಿಷ್ಯಕೋಟಿಗೆ ಅವರ ಜೀವನವೇ ಒಂದು ಪುಸ್ತಕವಾಗಿತ್ತು; ಆದರ್ಶಗಳ ಆಗರವಾಗಿತ್ತು.

ಕಲೆಗಾಗಿ ಮೀಸಲಾಗಿದ್ದ ದಂಡಾವತಿಮಠರು ಮುಂಬೈನಲ್ಲಿ "ನೂತನ ಕಲಾಮಂದಿರ"ವನ್ನು ಕಟ್ಟಿ, ಬೆಳೆಸಿದ ಕಾರ್ಯ ಒಂದು ದೈವೀ ಸಂಕಲ್ಪ ಎನ್ನಬಹುದು. ಉನ್ನತ ಕಲಾಶಿಕ್ಷಣವನ್ನು ಪಡೆಯುವುದರ ಜೊತೆಗೆ ಅನೇಕ ಪಾರಿತೋಷಕ, ಪದಕಗಳನ್ನು ವಿದ್ಯಾರ್ಥಿ ದೆಸೆಯಲ್ಲಿಯೇ ಗಳಿಸಿದ ದಂಡಾವತಿಮಠರು ಬಯಸಿದ್ದರೆ ಸರಕಾರಿ ನೌಕರಿಯನ್ನೋ ಅಥವಾ ಸ್ವಂತ ಸ್ಟುಡಿಯೋವನ್ನೋ ನಡೆಸಿ ಕೈತುಂಬ ಹಣ ಗಳಿಸಿ ಹಾಯಾಗಿ ಕಾಲ ಕಳೆಯಬಹುದಾಗಿತ್ತು. ಆದರೆ ಕಲಾ ಸೇವೆಯೇ ತಮ್ಮ ಧ್ಯೇಯವಾಗಿ ನಿಶ್ಚಯಿಸಿಕೊಂಡ ಅವರು ನೂತನ

ಕಲಾಮಂದಿರದ ನಿರ್ಮಾಣದಲ್ಲಿ ಹೆಗಲುಕೊಟ್ಟು ನಿಂತರು, ಕಲಾ-ಗುರುವಾದರು.

ಪ್ರಖ್ಯಾತ ಸರ್. ಜೆ. ಜೆ. ಸ್ಕೂಲ್ ಆಫ್ ಆರ್ಟ್ಸ್ ನಂತಹ ಸರಕಾರಿ ಕಲಾಶಾಲೆಯೊಂದು ಭದ್ರವಾಗಿ ನೆಲೆಗೊಂಡಿದ್ದಾಗ. ನೂತನ ಕಲಾಮಂದಿರದಂತಹ ಖಾಸಗಿ ಕಲಾಶಾಲೆಯೊಂದನ್ನು ಆರಂಭಿಸಿ ಖ್ಯಾತ ಕಲಾವಿದರನೇಕರನ್ನು ಸೃಷ್ಟಿಸಿದ ಕೀರ್ತಿಗೆ ಮೂವರು ಕನ್ನಡಿಗರು ಕಾರಣರಾಗಿರುವುದು ಹೆಮ್ಮೆಯ ಸಂಗತಿ. ಆದರೆ, ಇಂತಹ ಕೀರ್ತಿಯ ಸಿಂಹಪಾಲು ಸಲ್ಲಬೇಕಾದುದು ಗುರು ದಂಡಾವತಿಮಠರಿಗೆ, ಇಂಗ್ಲೆಂಡಿನ ಹೆಸರಾಂತ ರಾಯಲ್ ಅಕಾಡೆಮಿಯಲ್ಲಿ ಕಲಾಪದವಿಯನ್ನು ಪಡೆದು ತಾಯ್ನಾಡಿಗೆ ಮರಳಿಬಂದಿದ್ದ ಡಿ.ಜಿ. ಬಡಿಗೇರ ಹಾಗೂ ವ್ಹಿ. ಆರ್. ರಾವ್ ಇವರೊಟ್ಟಿಗೆ ಸೇರಿ ಕಲಾಶಾಲೆಯೊಂದನು ಕಟ್ಟಲು ದಂಡಾವತಿಮಠರು ಮುಂದಾದರು: ಕಟ್ಟಿದರು. ಮೊದಲಿಗೆ ಅದರ ಪ್ರಿನ್ಸಿಪಾಲರಾದರು. ಆದರೆ. ಐದಾರು ತಿಂಗಳಲ್ಲಿ ಸಮಸ್ಯೆಗಳು ಎದುರಾದವು. ಬಡಿಗೇರ ಅವರು ಡ್ರಾಯಿಂಗ್ ಇನ್‌ಸ್ಪೆಕ್ಟರರಾಗಿ ಸರಕಾರಿ ಸೇವೆಗೆ ಸೇರಿದರು. ಅನಂತರ, ರಾವ್ ಇಗ್ಲೆಂಡಿನಲ್ಲಿ ನೆಲೆಸುವ ಉದ್ದೇಶದಿಂದ ವಿದೇಶಕ್ಕೆ ತೆರಳಿದರು. ಇಂತಹ ಸಂದಿಗ್ಧ ಪರಿಸ್ಥಿತಿಯಲ್ಲಿ ಕಲಾಶಾಲೆಯ ನಿರ್ವಹಣೆಯ ಭಾರವನ್ನು ಸಂಪೂರ್ಣವಾಗಿ ಹೊತ್ತು ನಿಂತವರು ದಂಡಾವತಿಮಠ ಒಬ್ಬರೆ. ಅವರೇ ಶಿಕ್ಷಕರಾದರು, ಪ್ರಿನ್ಸಿಪಾಲರಾದರು. ಅವರೇ ಕಲಾಮಂದಿರದ ಆಧಾರಸ್ತಂಭವಾದರು.

ಮುಂಬೈನ ಪ್ರಿನ್ಸೆಸ್ ಸ್ಟ್ರೀಟ್‌ನ ದೇವಕರಣ ನಾನಜಿಯವರ ಕಟ್ಟಡದಲ್ಲಿ ೧೯೩೨ರಲ್ಲಿ ಆರಂಭಗೊಂಡ ಈ ಕಲಾಮಂದಿರ ೧೯೩೫ರಲ್ಲಿ ಫ್ರೆಂಚ್ ಸೇತುವೆಯ ಬಳಿಯ ತನ್ನ ಹೊಸ ಕಟ್ಟಡಕ್ಕೆ ವರ್ಗವಾಯಿತು. ಅಸಾಧ್ಯವಾದ ಪರಿಸರವನ್ನು ಗೆದ್ದು ಕಲಾಶಾಲೆಗೆ ಭದ್ರ ಬುನಾದಿಯನ್ನು ದಂಡಾವತಿಮಠರು ಹಾಕಿದರು. ಕಲಾಭೋದನೆಯಲ್ಲಿ ಅಪರಿಮಿತ ಆನಂದವನ್ನು ಅನುಭವಿಸುತ್ತಿದ್ದ ಅವರು ಕಲಾಭ್ಯಾಸಿ ವಿದ್ಯಾರ್ಥಿಗಳನ್ನು ಆಕರ್ಷಿಸಿದರು. ಕೇವಲ ಕೆಲ ವರ್ಷಗಳಲ್ಲಿ ಸರ್, ಜೆ. ಜೆ. ಸ್ಕೂಲ್ ಆಫ್ ಆರ್ಟ್ಸ್ ಸಂಸ್ಥೆಗೆ ಸರಿಸಮಾನವಾಗಿ

ಹಿಲ್ಲಬಲ್ಲ ದೃಢತೆಯನ್ನು "ನೂತನ ಕಲಾಮಂದಿರ" ಪಡೆದುಕೊಂಡಿತು. ಆರಂಭದಲ್ಲಿ ಐದಾರು ವಿದ್ಯಾರ್ಥಿಗಳನ್ನು ಒಳಗೊಂಡು, ಯಾವ ವಿಶೇಷವಾದ ಧನಸಹಾಯವೂ ಇಲ್ಲದಿರುವ ಈ ಕಲಾಶಾಲೆಯು ದಿನ ದಿನಕ್ಕೆ ವಿಶಾಲ ಕಲಾವೃಕ್ಷವಾಗಿ ಬೆಳೆಯಿತು; ಅವಿರತವಾಗಿ ಕಲಾ ದಾಸೋಹ ನಡೆಯಿತು. ಇದೆಲ್ಲದರಲ್ಲಿ ನೂರಕ್ಕೆ ನೂರರಷ್ಟು ದಂಡಾವತಿಮಠರ ಪರಿಶ್ರಮವಿದೆ ಎಂಬುದು ಅತಿಶಯದ ಮಾತಲ್ಲ.

ದಂಡಾವತಿಮಠರು ಎಂದೂ ಸಂಬಳದ ಗುರುಗಳಾಗಲಿಲ್ಲ, ಕಾಟಾಚಾರದ ಬೋಧಕರಾಗಲಿಲ್ಲ. ಯಾವುದನ್ನೇ ಆಗಲಿ ನಿರಪೇಕ್ಷ ಮನೋಭಾವದಿಂದ ತನುಮುಟ್ಟಿ ಮನಮುಟ್ಟಿ ಮಾಡುವುದು ಅವರ ಒಂದು ಗುಣವಿಶೇಷ, ಉದಾರವಾದ ಮನಸ್ಸು, ಕಲುಷವಿಲ್ಲದ ಹೃದಯ, ಅರ್ಥಕ್ಕಾಗಿ, ಸ್ವಾರ್ಥಕ್ಕಾಗಿ ಕುದಿಯದ ಪ್ರಶಾಂತ ವ್ಯಕ್ತಿತ್ವ-ಇವು ಅವರ ಘನತೆವೆತ್ತ ಗುರುಸ್ವಭಾವಗಳು. ಮುಂಬೈನಂತಹ ಪಟ್ಟಣದಲ್ಲಿ ಬಡತನವನ್ನು ಅಂಟಿಸಿಕೊಂಡು ಕಲಾ ಅಧ್ಯಯನ ಮಾಡಲು ಬಂದ ವಿದ್ಯಾರ್ಥಿಗಳಿಗೆ ನಿರಾಶೆಯಾಗಬಾರದು ತಮಗೊದಗಿನ ಕಷ್ಟ ಇನ್ನೊಬ್ಬರಿಗೆ ಬರಬಾರದು ಎಂಬುದೇ ಅವರ ಧೋರಣೆ. ಅಂತೆಯೇ ತಮ್ಮಿಂದ ಸಾಧ್ಯವಾದ ಎಲ್ಲ ಅನುಕೂಲತೆಗಳನ್ನು ವಿದ್ಯಾರ್ಥಿಗಳಿಗೆ ಒದಗಿಸಿಕೊಡುತ್ತಿದ್ದರೆ ವಿನಾ ಬರಬೇಕಾದ ಶುಲ್ಕಕ್ಕಾಗಿ ಯಾವ ವಿದ್ಯಾರ್ಥಿಯನ್ನು ಅವರು ನಿರ್ಬಂಧಿಸಲಿಲ್ಲ, ಕಾಡಲಿಲ್ಲ, ಯಾರ ಮನಸ್ಸನ್ನು ನೋಯಿಸಲಿಲ್ಲ. ಈ ವಿಚಾರದಲ್ಲಿ ಅವರ ಪ್ರತಿಯೊಬ್ಬ ಶಿಷ್ಯರೂ ಅವರಿಗೆ ಚಿರಋಣಿಯಾಗಿದ್ದಾರೆ. ದೇಶದ ಪ್ರಸಿದ್ಧ ಕಲಾವಿದರೂ ದಂಡಾವತಿ ಮಠರ ಶಿಷ್ಯರೂ ಆದ ಆಲಮೇಲಕರರು "ದಂಡಾವತಿ ಮಠರ ಹೃದಯ ಸಮುದ್ರದಂಥದು. ಬಡ ವಿದ್ಯಾರ್ಥಿಗಳಿಂದ ಎಂದೂ ಫೀ ಕೇಳಲಿಲ್ಲ. ಅಲ್ಲದೆ ಉಳ್ಳವರಿಗೂ ಫೀ ಕೊಡಲು ಎಂದೂ ಒತ್ತಾಯಿಸಲಿಲ್ಲ", ಎಂಬುದಾಗಿ ಅವರ ಔದಾರ್ಯದ ಹಿರಿಮೆಯನ್ನು ಕೊಂಡಾಡಿದ್ದುಂಟು ಇಂತಹ ಪ್ರಸಂಗಗಳು ಬಂದಾಗ ದಂಡಾವತಿ ಮಠರು ಆಗಾಗ ಹೇಳುತ್ತಿದ್ದ ಮಾತುಗಳು ಅಷ್ಟೇ ಮಾರ್ಮಿಕ ಮತ್ತು ಹೃದಯಸ್ಪರ್ಶಿಯಾದವು. ಅವರು "ದೇವರು ನನಗೆ ಈ ಎರಡು ಸುಂದರ, ಬಹೂಪಯೋಗಿಯಾದ ಕೈಗಳನ್ನು ಕೊಟ್ಟಿದ್ದಾನೆ. ಈ ಕೈ ನನ್ನವಲ್ಲ, ದೇವರವು

ನಿಮಗೆ ನನ್ನಲ್ಲಿದ್ದ ವಿದ್ಯೆಯನ್ನು ಈ ಕೈಗಳಿಂದ ಯಾವ ಅಪೇಕ್ಷೆಯಿಲ್ಲದೆ ಕೊಡುವೆನು" ಎನ್ನುತ್ತಿದ್ದರು ಅವರ ಈ ಮಾತುಗಳಲ್ಲಿ ಎಂತಹ ಜೀವನ ದರ್ಶನ, ಧ್ಯೇಯ ಅಡಗಿದೆ ಎಂಬುದನ್ನು ಊಹಿಸಬಹುದು.

ನೂತನ ಕಲಾಮಂದಿರ ಎಂದರೆ ಹಲವಾರು ಬಗೆಯ ಕಲಾಭಿರುಚಿಯುಳ್ಳ ಅಭ್ಯಾಸಿಗಳ ಒಂದು ಸಂಗಮವಾಗಿತ್ತು ಎಂದು ಪ್ರತೀತಿ. ಕಲಾಸಕ್ತಿಯಿರುವ ಚಿಕ್ಕಮಕ್ಕಳು, ಕಲೆಯಲ್ಲಿ ಪ್ರಾವಿಣ್ಯ ಸಂಪಾದಿಸಲು ಬಂದ ತರುಣರು, ಕಲೆಯನ್ನು ಹವ್ಯಾಸಕ್ಕಾಗಿ ಕಲಿಯಲು ಬಂದ ವಯಸ್ಕರು - ಹೀಗೆ ಅದೊಂದು ಕಲಾ ದೇಗುಲವಾಗಿತ್ತು. ಕರ್ನಾಟಕದ ಬೇರೆ ಬೇರೆ ಭಾಗಗಳಿಂದ ಹೋದ ವಿದ್ಯಾರ್ಥಿಗಳಿಗಂತೂ ಇದೇ ತವರು ಮನೆಯಾಗಿತ್ತು. ಇನ್ನು ಮುಂಬಯಿ. ಅಲ್ಲದೆ ಅನ್ಯ ದೇಶದ ವಿದ್ಯಾರ್ಥಿಗಳು ಕೂಡ ನೂತನ ಕಲಾ ಮಂದಿರವನ್ನು ಹುಡುಕಿಕೊಂಡು ಬರುತ್ತಿದ್ದರು. ಅವರವರ ಅಭಿರುಚಿ, ಬುದ್ಧಿ ಮತ್ತೆಗೆ ಅನುಸರಿಸಿ ಬೋಧನೆ ಪ್ರಯೋಗಗಳನ್ನು ಹೇಳಿಕೊಟ್ಟು ವಿದ್ಯಾರ್ಥಿಗಳ ವಿಶ್ವಾಸವನ್ನು, ಮನಸ್ಸನ್ನು ಗೆಲ್ಲುತ್ತಿದ್ದ ಕಲಾಗುರು ದಂಡಾವತಿಮಠರು ಇಡೀ ಕಲಾ ಮಂದಿರದಲ್ಲಿಯೇ ಒಂದು ಬಗೆಯ ಆತ್ಮೀಯವಾದ ವಾತಾವರಣವನ್ನು ಸೃಷ್ಟಿ ಮಾಡಿದ್ದರು. ಆಯಾ ಮಾತೃ ಭಾಷೆಯ ವಿದ್ಯಾರ್ಥಿಗಳ ಜೊತೆಗೆ ಆಯಾ ಭಾಷೆಯಲ್ಲಿಯೇ ಮಾತನಾಡಿ ಗುರು ಶಿಷ್ಯರ ಮಧ್ಯದ ಅಂತರವನ್ನು ಹೋಗಲಾಡಿಸಿ ಎಲ್ಲರೂ ಕಲಾ ಕುಟುಂಬದ ಸದಸ್ಯರೆಂಬ ವಿಶಾಲ ಭಾವನೆಯನ್ನು ಒಡಮೂಡಿಸಿದ್ದರು.

ವಿದ್ಯಾರ್ಥಿಗಳ ಮನಸ್ಸು ತುಂಬಿ ಬರುವಂತೆ ಬೋಧಿಸುವುದು, ಅವರುಗಳಿಗೆ ಸ್ಫೂರ್ತಿ ಸೆಲೆಯಾಗಿ ನಿಲ್ಲುವುದು. ಅವರಲ್ಲಿ ಸದಭಿರುಚೀ ಅಧ್ಯಯನಶೀಲತೆಗಳನ್ನು ರೂಢಿಸಿ ಕೊಳ್ಳಲು ಸಾಧ್ಯವಾಗುವ ಎಲ್ಲಾ ಅವಕಾಶಗಳನ್ನು ಕಲ್ಪಿಸಿ ಕೊಡುವುದೆಂದರೆ ದಂಡಾವತಿಮಠರಿಗೆ ಎಲ್ಲಿಲ್ಲದ ಸಂಭ್ರಮ. ತಮ್ಮ ವಿದ್ಯಾರ್ಥಿಗಳ ಕಲಾ ಕೃತಿಗಳು ಪ್ರದರ್ಶನಗೊಂಡರೆ, ಪ್ರಶಸ್ತಿ, ಬಹುಮಾನ, ಪ್ರಶಂಸೆಗಳು ಬಂದರೆ ವಿದ್ಯಾರ್ಥಿಗಳಿಗಿಂತಲೂ ಸ್ವತಃ ತಾವೇ ಹೆಚ್ಚು ಆನಂದಿತರಾಗುತ್ತಿದ್ದರು. ಅಭಿಮಾನ ಪಟ್ಟು ಕೊಳ್ಳುತ್ತಿದ್ದರು. ವಿದ್ಯಾರ್ಥಿಗಳ ಅಭಿಲಾಷೆಯಂತೆ ಬೇರೆ ಬೇರೆ ಪ್ರಾಂತದ ವೇಷ ಭೂಷಗಳನ್ನು ರೂಪದರ್ಶಿ

ಗಳಿಗೆ ತೋರಿಸಿ ಭಾವ ಚಿತ್ರಣಕ್ಕೆ ಆಸ್ಪದ ಮಾಡಿ-ಕೊಡುತ್ತಿದ್ದರು. ಹಾಗೆಯೇ ವಿದ್ಯಾರ್ಥಿಗಳ ಬೇರೆ ಬೇರೆ ಗುಂಪುಗಳನ್ನು ಮಾಡಿ-ನಿಸರ್ಗ ಚಿತ್ರಣಕ್ಕೂ, ರೇಖಾ ಚಿತ್ರಣಕ್ಕೂ ಸ್ವತಃ ತಾವೇ ಕರೆದು ಕೊಂಡು ಹೋಗುತ್ತಿದ್ದರು. ಹೀಗೆ ಮುಂಜಾನೆಯಿಂದ ಸಂಜೆಯುವರೆಗೂ ವಿದ್ಯಾರ್ಥಿ ಸಮೂಹದೊಡನಿದ್ದು ಶಿಕ್ಷಣವನ್ನು ನೀಡುತ್ತಿದ್ದ ದಂಡಾವತಿ-ಮಠರು ನೀಡಿದ್ದು ಜೀವವಿಲ್ಲದ ನೀರಸ ವಿದ್ಯೆಯಲ್ಲ. ಸುತ್ತಲಿನ ಬದುಕಿನ ಸೌಂದರ್ಯವನ್ನು ಮನದೆರೆದು, ಕಣ್ತೆರೆದು ನೋಡ ಬಲ್ಲ ಜೀವಂತ-ವಿದ್ಯೆಯನ್ನು. ಸತತವೂ ತಮ್ಮ ಶಿಷ್ಯರ ಉತ್ಕರ್ಷೆಗೆ ಚಿಂತಿಸುತ್ತಿದ್ದ ಮುಕ್ತವಾದ ಮನಸ್ಸು, ಆದರ್ಶವಾದ ನಡೆನುಡಿ, ನಿರ್ಲಿಪ್ತವಾದ ಅವರ ಜೀವನ ವಿಧಾನಗಳು ದಂಡಾವತಿಮಠರನ್ನು ಮಹಾಗುರುವನ್ನಾಗಿ ಸಿದ್ದವು. ವಿದ್ಯಾರ್ಥಿಗಳ ಕಲಾ ಸಿದ್ಧಿಯಲ್ಲಿಯೇ ತಮ್ಮ ಕಲಾ ಜೀವನದ ಸಾರ್ಥಕತೆಯನ್ನು ಕಂಡುಂಡ ನಿಜವಾದ ಗುರು ಅವರಾಗಿದ್ದರು.

ದಂಡಾವತಿ-ಮಠರು ಕಲಾವಿದರಾದ ಎಷ್ಟೊಂದು ಕಲಾ ಕೃತಿಗಳನ್ನು ರಚಿಸ ಬೇಕಾಗಿತ್ತೊ ಪರಿಸ್ಥಿತಿಯ ಒತ್ತಡಕ್ಕೆ ಸಿಕ್ಕು ಅಷ್ಟನ್ನು ರಚಿಸಲು ಸಾಧ್ಯವಾಗಲಿಲ್ಲ ಎನ್ನುವ ಮಾತೇನೋ ನಿಜ. ಆದರೆ, ಸ್ವಾರ್ಥ-ಕೀರ್ತಿ-ಗಳನ್ನು ಬದಿಗೊತ್ತಿ ನಿಸ್ಪೃಹವಾಗಿ ವಿದ್ಯಾರ್ಥಿಗಳಿಗೆ ಕಲಾ ಶಿಕ್ಷಣವನ್ನು ನೀಡಿದುದರ ಫಲವಾಗಿ ಪ್ರಸಿದ್ಧ ಕಲಾವಿದರುಗಳ ತಂಡವೇ ನೂತನ ಕಲಾ ಮಂದಿರದಿಂದ ಹೊರ ಬಂದಿತು. ತಮ್ಮ ವಿದ್ಯಾರ್ಥಿಗಳಿಗೆ ನೀಡುತ್ತಿದ್ದ ವಿದ್ಯಾ ದಾನವೇ ಕಲಾ ದೇವತೆಯ ಆರಾಧನೆ ಎಂದು ಭಾವಿಸಿ ಜೀವನದುದ್ದಕ್ಕೂ ಅದನ್ನು ನಡೆಸಿಕೊಂಡು ಬಂದ ಕಲಾ ಗುರು.ದಂಡಾವತಿ-ಮಠರ ಶಿಷ್ಯ ಸಂಪತ್ತು ಐದು ಆರು ಸಾವಿರದಷ್ಟು. ಅವರುಗಳಲ್ಲಿ ಪದ್ಮಶ್ರೀ ಕೆ. ಕೆ. ಹೆಬ್ಬಾರ. ಮತ್ತು ಶ್ರೀಯುತರುಗಳಾದ ಎ. ಎ. ಆಲಮೇಲಕರ, ಎಸ್. ಎಂ. ಪಂಡಿತ, ರಾರುಬಾ, ಲಕ್ಷ್ಮಣ ಪೈ. ಗಾಯತೊಂಡೆ. ಬರಾಸ್ಕರ್, ದಯಾನಂದ ಶೆಟ್ಟಿ, ಡಿಕೋಸ್ಟಾ, ನಾಬಿನ್ನವರ ಮುಂತಾದ ಕಲಾವಿದರೆಲ್ಲ ದೇಶದ, ಅಂತರ್ ರಾಷ್ಟ್ರೀಯ ಕಲಾವಿದರೆಂದು ಹೆಸರುಗಳಿಸಿರುವರು.

[illegible]ರಲ್ಲಿ ಬೆಳ್ಳಿ ಹಬ್ಬವನ್ನು ಕಂಡ ನೂತನ ಕಲಾ ಮಂದಿರ ದಂಡಾವತಿ-ಮಠರು ತ್ರಿಕರಣ ಪೂರ್ವಕವಾಗಿ ಸಲ್ಲಿಸಿದ ಕಲಾ ಸೇವೆಯ ದ್ಯೋತಕ.

ಶ್ರೀ ಎಂ. ಸಿ. ಛಾಗಲಾ ಅವರು ಬೆಳ್ಳಿ ಹಬ್ಬದ ಸಮಾರಂಭವನ್ನು ಉದ್ಘಾಟಿಸುತ್ತ ಕಲಾ ಗುರು ದಂಡಾವತಿಮಠರ ಅನುಪಮ ಸೇವೆಯನ್ನು ಕೊಂಡಾಡಿದರು. ಇದಲ್ಲದೆ, ಬೇರೆ ಬೇರೆ ಸಂದರ್ಭಗಳಲ್ಲಿ ಪ್ರಖ್ಯಾತ- ಸಾಹಿತಿಗಳನ್ನು, ಕಲಾವಿದರನ್ನು ಆತ್ಮೀಯವಾಗಿ ತಮ್ಮ ಕಲಾ ಶಾಲೆಗೆ ಬರಮಾಡಿಕೊಂಡು ಉಪನ್ಯಾಸಗಳನ್ನು ವ್ಯವಸ್ಥಿತಗೊಳಿಸುತ್ತಿದ್ದುದು ಸಾಮಾನ್ಯವಾಗಿತ್ತು. ಶ್ರೀಮತಿ. ಸರೋಜಿನಿ ನಾಯ್ಡು, ಶ್ರೀ ಸಾನೆ ಗುರೂಜಿ, ವರಕವಿ ಬೇಂದ್ರೆ. ಅಣ್ಣ ಮಾಸ್ತಿ, ಕವಿ ವ್ಹಿ.ಕೆ. ಗೋಕಾಕ ಮೊದಲಾದ ಮಹನಿಯರುಗಳು ಕಲಾ ಮಂದಿರಕ್ಕೆ ಭೇಟಿಯಿತ್ತು ಕಲಾಗುರುವಿನ ಪವಿತ್ರ ಕಾರ್ಯವನ್ನು ಪ್ರಶಂಸಿದ್ದನ್ನು ಇಲ್ಲಿ ಸ್ಮರಿಸಬಹುದು.

೧೯೬೬ರ ವರೆಗೆ ನೂತನ ಕಲಾಮಂದಿರದ ಪ್ರಿನ್ಸಿಪಾಲರಾಗಿ ಸೇವೆ ಸಲ್ಲಿಸಿ ನಿವೃತ್ತರಾಗಿ ಧಾರವಾಡದಲ್ಲಿ ನೆಲೆಸಿದ ಮೇಲೆಯೂ ದಂಡಾವತಿಮಠರು ಕ್ರಿಯಾಹೀನ ನಿವೃತ್ತ ಜೀವನವನ್ನು ಸಾಗಿಸಿದವರಲ್ಲ. ತಮ್ಮ ಮನೆಯ ಒಂದು ಭಾಗವನ್ನೇ ಕಲಾಗಾರವನ್ನಾಗಿ ಮಾರ್ಪಡಿಸಿ ಪ್ರತಿದಿನವೂ ನಿಯಮಿತವಾಗಿ ಚಿತ್ರರಚನೆ ಮಾಡುತ್ತ ಕಾಲ ಕಳೆಯುತ್ತಿದ್ದರು. ಗುರುವಾಗಿ ಹುಟ್ಟಿ, ಗುರುವಾಗಿ ಬೆಳೆದು, ನಿವೃತ್ತಿಯ ವರೆಗೂ ಗುರುವಾಗಿಯೇ ದುಡಿದ ಅವರು ತಮ್ಮ ಪ್ರತಿಭಾಶಕ್ತಿಯ ಒಂದೊಂದು ಕಣವನ್ನು ಕೂಡ ಹಂಚಿಕೊಡಬೇಕೆಂಬ ಉತ್ಕಟವಾದ ಆಸೆಯನ್ನು ಹೊಂದಿದವರು. ಹೀಗಾಗಿ, ತಮ್ಮಮಟ್ಟಿಗೆ ತಾವು ಚಿತ್ರ ಬರೆಯುವುದರಿಂದ ತೃಪ್ತರಾಗದೆ ಉಳಿದ ಸಮಯವನ್ನು ಪರರ ಹಿತಕ್ಕಾಗಿ ಕಲಿಸು ಮೂಲಕವಾಗಿ ಶ್ರಮಿಸಲು ಮುಂದಾದರು. ಅದರ ಪರಿಣಾಮವಾಗಿ ಬುದ್ಧಿ ಮಾಂದ್ಯದಿಂದ ಬಳಲುವ ಮಕ್ಕಳಿಗಾಗಿ ಒಂದು ಕಲಾಶಿಕ್ಷಣ ಶಾಲೆಯನ್ನು ಧಾರವಾಡದಲ್ಲಿ ಆರಂಭಿಸಿದರು. ಕಲಾ ಶಿಕ್ಷಣವು ಇಂತಹ ಮಕ್ಕಳ ಮಾನಸಿಕ ಸ್ಥಿತಿಯನ್ನು ಸುಧಾರಿಸುತ್ತದೆ ಎಂಬುದನ್ನು ಅವರು ದೃಢವಾಗಿ ನಂಬಿದರು. ಈ ದಿಸೆಯ ಅವರ ಪ್ರಯತ್ನದಿಂದಾಗಿ ಹಲವಾರು ಮಕ್ಕಳು ಮಾನಸಿಕವಾಗಿ ಚೇತರಿಸಿಕೊಳ್ಳುವಂತಾಯಿತು. ಆದರೆ ಇಷ್ಟು ಇಳಿವಯಸ್ಸಿನಲ್ಲಿ ಕಷ್ಟಸಾಧ್ಯವಾದ ಈ ಕಾರ್ಯ ಉಚಿತವಲ್ಲವೆಂದು ವೈದ್ಯರು ಮಾಡಿದ ಸಲಹೆಯಿಂದಾಗಿ ದಂಡಾವತಿಮಠರು ಆ ಪ್ರಯತ್ನವನ್ನು ಅಲ್ಲಿಗೇ ಬಿಡಬೇಕಾಯಿತು.

ಕಲಾಸೇವೆಯು ಮಾತ್ರವಿದ್ದರೆ ಸಾಕು ಅವರನ್ನು ಆವರಿಸಿದ ಮುಪ್ಪು ಕೂಡ ಹಿಂದೆ ಸರಿದು ಉತ್ಸಾಹಕ್ಕೆ ದಾರಿ ಮಾಡಿಕೊಡುತ್ತಿತ್ತು. ಮಕ್ಕಳಿಗಾಗಿ ಆರಂಭಿಸಿದ ಕಲಾಶಾಲೆಯನ್ನು ನಿಲ್ಲಿಸಿದ ಮೇಲೆ ಅವರು ಸುಮ್ಮನೆ ಕುಳಿತು ಕೊಳ್ಳಲಿಲ್ಲ. ಕರ್ನಾಟಕ ವಿಶ್ವವಿದ್ಯಾಲಯದ ಸ್ನಾತಕೋತ್ತರ ವಿದ್ಯಾರ್ಥಿಗಳಿಗೆ ಕಲಾಶಿಕ್ಷಣವನ್ನು ಕೊಡಲು ಮುಂದಾದರು. ವಾರದ ಕೆಲವು ದಿನಗಳಲ್ಲಿ ಸಮ್ಯಾಹಿಗಳಿಗೆ ಮಾತ್ರ ನಡೆಸಲಾಗುತ್ತಿದ್ದ ಈ ತರಗತಿಗಳನ್ನು ಯಾವ ಪ್ರತಿಫಲದ ಆಶೆಯಿಲ್ಲದೆ ದಂಡಾವತಿಮಠರು ನಡೆಸುತ್ತಿದ್ದರು. ಇದು ಕಲೆಗಾಗಿ, ಕಲಾಶಿಕ್ಷಣಕ್ಕಾಗಿ ಅವರಲ್ಲಿದ್ದ ಆಸಕ್ತಿಯನ್ನು ವ್ಯಕ್ತಗೊಳಿಸುತ್ತದೆ. ಕರ್ನಾಟಕ ವಿಶ್ವವಿದ್ಯಾಲಯದ ವ್ಯಾಪ್ತಿಗೆ ಒಳಪಟ್ಟ ಕಾಲೇಜುಗಳಲ್ಲಿ ಚಿತ್ರಕಲೆಯು ಒಂದು ಐಚ್ಛಿಕ ವಿಷಯವಾಗಿ ಬೋಧಿಸುವಂತಾಗಬೇಕು ಎಂದು ಶ್ರಮಿಸಿದವರಲ್ಲಿ ಇವರು ಮುಖ್ಯರಾಗಿದ್ದಾರೆ. ಅವರ ದಣಿವರಿಯದ ಚೇತನಕ್ಕೆ ಈ ಕಲಾ ಚಟುವಟಿಕೆಗಳು ಸಾಲಲಿಲ್ಲವೇನೊ ಎಂಬಂತೆ. ಧಾರವಾಡ, ಹುಬ್ಬಳ್ಳಿ, ಗದಗ ಮತ್ತು ದಾವಣಗೆರೆ ಮುಂತಾದ ಕಲಾಶಾಲೆಗಳಿಗೆ ಹೋದಾಗಲೆಲ್ಲಾ ಕಲೆಗೆ ಸಂಬಂಧಿಸಿದ ತಮ್ಮ ಅನುಭವದ ಮಾತುಗಳನ್ನು ರೋಚಕವಾಗಿ ಹೇಳುತ್ತಿದ್ದರು. ಈ ಕಲಾವಿದರು ಕೇವಲ ಮಾತಿನವರೂ ಅಲ್ಲ. ತಾವು ಹೋದಲ್ಲೆಲ್ಲಾ ವಿದ್ಯಾರ್ಥಿಗಳನ್ನು ಸುತ್ತಲೂ ಕೂಡಿಸಿಕೊಂಡು ಪ್ರಾತ್ಯಕ್ಷಿಗಳನ್ನು ಕೊಡುತ್ತಿದ್ದರು. ಕೈನಡುಗುವ ವಯಸ್ಸಿನ ಕಲಾಗುರುವಿನ ದಿಟ್ಟವಾದ ಕುಂಚದ ಎಳೆತಗಳು, ನೇರ ಮತ್ತು ಪ್ರಜ್ವಲ ಬಣ್ಣಗಳ ಲೇಪನ ನೈಪುಣ್ಯ ತರುಣ ಕಲಾವಿದರನ್ನು, ಕಲಾ ವಿದ್ಯಾರ್ಥಿಗಳನ್ನು ಮಂತ್ರಮುಗ್ಧರನ್ನಾಗಿಸುತ್ತಿದ್ದವು. ಕಟ್ಟುನಿಟ್ಟಿನ ಸಂಪ್ರದಾಯ ಪದ್ಧತಿಯಲ್ಲಿ ಅವರು ಕಲಾ ಶಿಕ್ಷಣವನ್ನು ಪಡೆದಿದ್ದರೂ ನವ್ಯ ಕಲೆಯ ಬಗ್ಗೆ ತಾತ್ಸಾರದ ಮಾತನ್ನಾಡಿದವರಲ್ಲ. ಮೂಲತತ್ವವನ್ನರಿಯದೆ ಅಡ್ಡಾದಿಡ್ಡಿಯಾಗಿ ಬೆಳೆಯುವ ನವ್ಯ ಕಲೆಯನ್ನು ಮಾತ್ರ ಅವರು ಒಪ್ಪಿದವರಲ್ಲ. ಭದ್ರವಾಗಿ ತಳಹದಿಯ ಮೇಲೆ ಹೊಸ ಆವಿಷ್ಕಾರಗಳು, ನವೀನ ಪ್ರಯೋಗಗಳು ನಡೆಯಬೇಕು. ಅದೇ ಕಲೆಯ ನಿಜವಾದ ವಿಕಾಸ ಎಂಬುದೇ ಅವರ ನಂಬಿಕೆ. ಕಲಾವಿದರಲ್ಲಿ ನಡೆಯುವ ಯಾವುದೇ ಚಟುವಟಿಕೆಯಾದರೂ ಸರಿ, ಅವರದು ಮುಚ್ಚಿದ ಮನಸ್ಸಲ್ಲ; ಮುಕ್ತವಾದ ತೆರೆದ ಮನಸ್ಸು.

ದಂಡಾವತಿಮಠರ ಜೀವನದ ಸಂದೇಶವೇ ಕಲೆಗಾಗಿ, ಕಲಾ ಶಿಕ್ಷಣಕ್ಕಾಗಿ, ಕಲಾ ಪ್ರಸಾರಕ್ಕಾಗಿ ಸಲ್ಲಿಸಿದ ನಿಃಸಲು ಸೇವೆ. ತಮ್ಮ ಜೀವನದ ಬಹು ಭಾಗವನ್ನು ಮುಂಬೈಯಲ್ಲಿ ಕಳೆದಿದ್ದರೂ, ಕಲಾಕ್ಷೇತ್ರದ ಒಟ್ಟು ಅಭಿವೃದ್ಧಿಗಾಗಿ ತಮ್ಮನ್ನು ಸಮರ್ಪಿಸಿಕೊಂಡ ಅವರಿಗೆ ಕರ್ನಾಟಕ ಲಲಿತಕಲಾ ಅಕಾಡೆಮಿಯು ೧೯೬೯ ರಲ್ಲಿ ರಾಜ್ಯಪ್ರಶಸ್ತಿಯ ಗೌರವವನ್ನು ಸಲ್ಲಿಸಿದ್ದು ಉಚಿತ. ೧೯೩೩ ರಿಂದ ೧೯೫೦ರ ವರೆಗೆ ಬೆಳಗಾಂವಿಯ ಕರ್ನಾಟಕ ಆರ್ಟ್ ಸೊಸೈಟಿಯ ಕಾರ್ಯದರ್ಶಿಗಳಾಗಿ ಕೆಲಸ ಮಾಡಿದ ದಂಡಾವತಿಮಠರು ಮುಂಬೈಯ ಕಲಾ ಶಿಕ್ಷಣ ಪರೀಕ್ಷೆಗಳಿಗೆ ಪರೀಕ್ಷಕರಾಗಿಯೂ, ಪರೀಕ್ಷಾಮಂಡಲಿಯ ಸದಸ್ಯರಾಗಿಯೂ ಕಾರ್ಯ ನಿರ್ವಹಿಸಿದರು. ಬರೋಡ ವಿಶ್ವವಿದ್ಯಾಲಯ, ಸ್ಕೂಲ್ ಆಫ್ ಆರ್ಟ್ಸ್, ನಾಗಪುರ, ಬನಾರಸ ಹಿಂದೂ ವಿಶ್ವವಿದ್ಯಾಲಯ, ಮುಂಬೈ ಕಲಾಶಾಲೆಗಳ ಫೆಡರೇಶನ್, ಕರ್ನಾಟಕ ವಿಶ್ವವಿದ್ಯಾಲಯ, ಕರ್ನಾಟಕದ ಉಚ್ಚ ಕಲಾ ಪರೀಕ್ಷೆಗಳ ಮಂಡಲಿ, ದಾವಣಗೆರೆ ಸ್ಕೂಲ್ ಆಫ್ ಆರ್ಟ್ಸ್ ಸಂಸ್ಥೆಗಳ ಪರೀಕ್ಷಾಮಂಡಲಿ-ಇವುಗಳ ಕ್ರಿಯಾಶೀಲ ಸದಸ್ಯರಾಗಿ, ತಮ್ಮ ಜವಾಬ್ದಾರಿಯುತ ಕಾರ್ಯಕ್ಷಮತೆಯಿಂದ ತುಂಬಾ ಜನಪ್ರಿಯರಾದರು.

೧೯೬೧ ರಲ್ಲಿ ಬನಾರಸ ಹಿಂದೂ ವಿಶ್ವವಿದ್ಯಾಲಯವು ಲಲಿತಕಲಾ ಕಾಲೇಜಿನ ಪ್ರಾಧ್ಯಾಪಕ ವರ್ಗದ ಆಯ್ಕೆ ಸಮಿತಿಯ ಸದಸ್ಯರನ್ನಾಗಿ ಮಾಡಿಕೊಂಡು ಗೌರವಿಸಿತು, ದಾವಣಗೆರೆಯ ಕಲಾ ಶಾಲೆಯ ಸಲಹಾ ಮಂಡಲಿಯ ಸದಸ್ಯತ್ವವನ್ನೂ, ರಾಜ್ಯದ ಕಲಾ ಕೈಗಾರಿಕಾ ಮಂಡಲಿಯ ಸದಸ್ಯತ್ವವನ್ನೂ, ಕರ್ನಾಟಕ ವಿಶ್ವವಿದ್ಯಾಲಯ ಕಲಾ ಅಭ್ಯಾಸ ಮಂಡಲಿಯ ಸದಸ್ಯತ್ವವನ್ನೂ ಕೊಟ್ಟು ಅವರ ಪರಿಪಕ್ವವಾದ ಅನುಭವದ ಪ್ರಯೋಜನ ಹೊಂದಿದವು. ಅದರಂತೆ ಮುಂಬೈ ಆರ್ಟ್ ಸೊಸೈಟಿ, ರಾಜ್ಯ ಲಲಿತ ಕಲಾ ಅಕೆಡೆಮಿ, ಕರ್ನಾಟಕ ವಿಶ್ವವಿದ್ಯಾಲಯದ ಸ್ನಾತಕೋತ್ತರ ವಿಭಾಗ, ಮೈಸೂರು ದಸರಾ ಪ್ರದರ್ಶನ ಸಮಿತಿ ಮೊದಲಾದ ಕಲಾ ಪ್ರದರ್ಶನಗಳ ಸಮಿತಿಯ ಕಾರ್ಯಾಧ್ಯಕ್ಷರಾಗಿ ದಂಡಾವತಿಮಠರು ಸಲ್ಲಿಸಿದ ಸೇವೆ ಸ್ಮರಣೀಯ. ಅವರು ಯಾವುದೇ ಕಾರ್ಯವನ್ನು, ಅದು ದೊಡ್ಡದಿರಲಿ, ಸಣ್ಣದಿರಲಿ, ಕೇವಲ ಹೆಸರಿಗಾಗಿ, ಪ್ರತಿಷ್ಠೆಗಾಗಿ ಎಂದೂ ಮಾಡಲಿಲ್ಲ. ಯಾವದನ್ನಾದರೂ ಮನಃಪೂರ್ವಕವಾಗಿ ಮಾಡುವುದು ಅವರ

ಸ್ವಭಾವ. ಅಂತೆಯೇ ಕಲಾಕ್ಷೇತ್ರದ ಬೇರೆ ಬೇರೆ ಗೌರವದ ಸ್ಥಾನಮಾನಗಳು ದಂಡಾವತಿಮಠರನ್ನು ಹುಡುಕಿಕೊಂಡು ಬಂದವೆಂದು ಹೇಳಿದರೆ ಅತಿಶಯೋಕ್ತಿಯಲ್ಲ.

ಹೀಗೆ ಕಲಾಭಿವೃದ್ಧಿಗಾಗಿ ಕಲಾ ಶಾಲೆಯೊಂದನ್ನು ಮುಂಬೈಯಂತಹ ಪಟ್ಟಣದಲ್ಲಿ ಕಟ್ಟಿ. ಬಂದ ಎಲ್ಲ ಕಷ್ಟ ಪರಂಪರೆಗೂ ಎದೆಗೊಟ್ಟು ನಿಂತ ಗುರು ಪಾದವನಿಗೆ ಶಿಷ್ಯರ ಅಭಿವೃದ್ಧಿಯೇ ಜೀವನ ಎಂಬುದನ್ನು ಶಬ್ದಶಃ ಪಾಲಿಸಿ ಆಜನ್ಮ ಪರ್ಯಂತ ಪರಿಶ್ರಮಿಸಿದ ಕಲಾಗುರು ದಂಡಾವತಿಮಠ. ಈ ಜೀವನ ವಷ್ಟೇ ಏಕೆ ಜನ್ಮ ಜನ್ಮಾಂತರಗಳೂ ಕಲೆಗಾಗಿ ಅರ್ಪಿತ ಎಂಬುದನ್ನು ಅವರು ಆಡಿದ ಮಾತುಗಳಲ್ಲಿ ಕಂಡುಕೊಳ್ಳಬಹುದು. ಅದೊಂದು ಹೃದಯಸ್ಪರ್ಶಿಯಾದ ಸನ್ನಿವೇಶ. ತಾವು ಕೈಯಾರೆ ನೀರೆರೆದು ಬೆಳಸಿದ ಮಹಾ ವೃಕ್ಷ ನೂತನ ಕಲಾಮಂದಿರಕ್ಕೆ ನಿವೃತ್ತಿಯಾದ ಎಂಟು ವರ್ಷಗಳ ನಂತರ ಸಂದರ್ಶಿಸಿದರು. ಆಗ ಅವರು ತಮ್ಮ ಕೊನೆಯಾಸೆಯನ್ನು ಹೇಳುತ್ತಿರುವರೋ ಎಂಬಂತೆ "ನಾನು ಈ ನಾಲ್ಕು ಗೋಡೆಯೊಳಗೆ ಇರುವೆ. ಅದನ್ನು ಬಿಟ್ಟು ಅಗಲಲಾರೆ. ನನಗಾಗಿ ಯಾವಾಗಲೂ ಈ ಬಾಗಿಲು ತೆರೆದಿಟ್ಟಿರಬೇಕು" ಎಂದು ಕಣ್ಣೊರಸಿಕೊಂಡರು. ಕಲಾ ಗುರುವಿನ ಭಾವ ಪರವಶತೆಯು ಈ ಸನ್ನಿವೇಶಕ್ಕೆ ಯಾವ ವಿವರಣೆ ಕೊಡಬೇಕು? ತಾವು ಕಟ್ಟಿದ ಸಂಸ್ಥೆ ವಿಶಾಲವಾಗಿ ಬೆಳೆದು ನಿಂತದನ್ನು ಕಂಡು ಉಕ್ಕಿದ ಆನಂದ ಭಾಷ್ಪಗಳೋ, ಮತ್ತೆ ಇಲ್ಲಿ ಬರಲಾರೆನೆಂಬ ವೇದನೆಯ ಕಣ್ಣೀರೋ ಅಥವಾ ನಾನಿರುವುದೇ ಇಲ್ಲಿ-ಎಂಬ ತೃಪ್ತಿಯಿಂದ ಕಣ್ಣಂಚಿನಲ್ಲಿ ತುಂಬಿಬಂದ ಹನಿಗಳೋ-ಅದರ ಮರ್ಮವನ್ನು ದಂಡಾವತಿಮಠರೇ ಬಲ್ಲರು.

ದಂಡಾವತಿಮಠರು ಎಲೆಯ ಮರೆಯ ಪರಿಪಕ್ವಫಲ. ಅವರ ಸೇವೆ ಅಸಾಧಾರಣ. ಅವರನ್ನು ವಿದ್ಯಾರ್ಥಿಯಾಗಿಯೂ ಅನಂತರ ನೂತನ ಕಲಾಮಂದಿರದ ಪ್ರಿನ್ಸಿಪಾಲರನ್ನಾಗಿಯೂ ಕಂಡಿದ್ದ ಕ್ಯಾಪ್ಟನ್ ಸಾಲೋಮನ್ ಅವರು " I have long known Mr. Dandavathimath as an enthusiastic student and Professor of Art" ಎಂದು ಹೇಳುತ್ತ

ಅವರು ಕಟ್ಟಿದ ಕಲಾ ಶಾಲೆಯ ಬಗ್ಗೆ "........this Art school will play a very useful part in the awakening of art in Western India'' ಎಂದಿರುವುದು ಸಣ್ಣ ಮಾತಲ್ಲ. ಅದು ಕಲಾ ಗುರುವಿನ ಸಾರ್ಥಕವಾದ ಸೇವೆಗೆ ನಿದರ್ಶನ: ಕಲಾಕ್ಷೇತ್ರದಲ್ಲಿ ಅವರಿಗಿರುವ ಸ್ಥಾನದ ನಿದರ್ಶನ ಎನ್ನಬಹುದು.

**ಜೀವನ :**

ಜೀವನದ ಸಾರವನ್ನು ಗ್ರಹಿಸಿ ತೃಪ್ತಿಯಿಂದ ಬಾಳುವುದು ಒಂದು ಕಲೆ. ಮನುಷ್ಯ ತನ್ನ ಜೀವಮಾನದಲ್ಲಿ ವಿದ್ಯೆ, ಹುದ್ದೆ, ಅಧಿಕಾರ, ಸಂಪದ ಇನ್ನೂ ಏನೇನೋ ಸಂಪಾದಿಸಬಹುದು. ಆದರೆ ಜೀವನವನ್ನು ಹೇಗೆ ರೂಪಿಸಿಕೊಳ್ಳ ಬೇಕು ? ಹೇಗಾದರೆ ಸಾರ್ಥಕ ಎಂಬುದನ್ನು ಯೋಚಿಸುವವರು ವಿರಳ ; ಯೋಚಿಸಿದರೂ ಅದರಂತೆ ಬಾಳುವವರು ಇನ್ನೂ ವಿರಳ. ಜೀವನವನ್ನು ಒಳ ಹೊಕ್ಕು ನೋಡಿ ಅದರ ಆಳ ಅಗಲಗಳನ್ನು ಮನಗಂಡವನು ಮಾತ್ರ ಜೀವನ ಕಲಾವಿದನಾಗುತ್ತಾನೆ.

ಒಂದು ಕಲಾಕೃತಿಯನ್ನು ಸೃಷ್ಟಿಸುವಾಗ, ಸೃಷ್ಟಿಸಿದ ನಂತರ ಕಲಾವಿದ ನಿಗೂ ಕಲಾಕೃತಿಗೂ ಇರುವ ಸಂಬಂಧ ಎಂತಹದೋ ಅಂತಹದೇ ಸಂಬಂಧವು ಜೀವನಕ್ಕೂ, ಮರ್ಮವರಿತು ಬಾಳಿದ ಜೀವನ ಕಲಾವಿದನಿಗೂ ಇರುತ್ತದೆ. ದಂಡಾವತಿಮಠರ ಜೀವನ ಒಂದು ಕಲಾಕೃತಿ, ಅದನ್ನು ಬದುಕಿದ ಅವರು ಅಪೂರ್ವ ಕಲಾವಿದರು.

ಮಡದಿ* ಆರುಜನ ಮಕ್ಕಳಿಂದೊಡಗೂಡಿದ ಒಪ್ಪವಾದ ಸಂಸಾರ ದಂಡಾ ವತಿಮಠರದು. ಮೂರುಜನ ಗಂಡುಮಕ್ಕಳು, ಮೂರು ಹೆಣ್ಣುಮಕ್ಕಳು. ಎಲ್ಲ ರಿಗೂ ಸುಸಂಸ್ಕಾರ, ಸುವಿದ್ಯೆ, ಸುಸ್ವಭಾವದ ಶ್ರೀಮಂತಿಕೆಯನ್ನು ಹಂಚಿ ಕೊಟ್ಟಿದ್ದಾರೆ. ಕಲಾಗುರುವಾಗಿ ಒಳ್ಳೆಯ ಶಿಷ್ಯಕಲಾವಿದರನ್ನು ರೂಪಿಸಿ ದೇಶದ ಋಣವನ್ನು ತೀರಿಸಿದಂತೆ ಜೀವನ ಕಲಾವಿದರಾಗಿ ಕುಟುಂಬದ ಯಜಮಾನಿಕತೆಯ ಕರ್ತವ್ಯಗಳನ್ನೆಲ್ಲ ತೃಪ್ತಿಕರವಾಗಿ ನಿರ್ವಹಿಸಿದರು.

---

*ಎರಡನೆಯ ಸಂಬಂಧ.

ಜಾತಿ, ಪ್ರತಿಷ್ಠೆ, ಅಧಿಕಾರ, ದರ್ಪ, ಹುದ್ದೆಯ ಅಮಲು, ಸಣ್ಣವರು, ದೊಡ್ಡವರು ಎಂಬ ಭೇದಭಾವಗಳು ದಂಡಾವತಿಮಠರ ಸಮೀಪಕ್ಕೂ ಸುಳಿಯು ಲಿಲ್ಲ. ತಾವಾಗಿಯೇ ಏನನ್ನೂ ಬಯಸದೆ ಗುಪ್ತ ಭಕ್ತನಂತೆ ಕಲಾಸೇವೆಗೈದು 'ಬಂದ ಬಂದುದನ್ನು ಸಂದ ಪ್ರಸಾದ'ವೆಂದು ಸ್ವೀಕರಿಸಿ ಕಲೆಯಲ್ಲಿ ಐಕ್ಯವನ್ನು ಹೊಂದಿ ಸ್ನೇಹ, ವಿಶ್ವಾಸ, ಗೌರವಗಳನ್ನು ವಿನಿಮಯಿಸಿ ಆಡು ಆಡುತ್ತಲೇ ಜೀವನವನ್ನು ಗೆದ್ದು ನಿಂತರು. ಅವರದು ಜಾತಿ ಮತ, ದೇಶಕಾಲವನ್ನು ಮೀರಿದ ಹಿರಿಯ ಜೀವವೆಂಬುದನ್ನು ಕಲಾವಿದ ಅಲಮೇಲಕರರು ತಮ್ಮದೇ ನಿದರ್ಶನವೊಂದನ್ನು ಕೊಡುತ್ತ "ಆವರು ಸಂಪ್ರದಾಯಸ್ಥ ಹಿರೇಮಠ ಮನೆತನ ದವರು. ನಾನೋ ಒಬ್ಬ ಮುಸಲ್ಮಾನ ವಿದ್ಯಾರ್ಥಿ. ಹೀಗಿದ್ದರೂ ಯಾವುದೇ ರೀತಿಯ ಜಾತಿ ಭೇದ ಮಾಡಲಿಲ್ಲ. ಅವರ ಮಕ್ಕಳ ಜೊತೆಯಲ್ಲಿಯೇ ನನಗೆ ಊಟ ಬಡಿಸುತ್ತಿದ್ದರು" ಎಂಬುದಾಗಿ ಸಾರಿದ್ದಾರೆ.

ತಮ್ಮ ಸಮಕಾಲೀನರಾದ ಕಲಾವಿದರಲ್ಲಿ, ಸ್ನೇಹಿತರಲ್ಲಿ-ಸ್ವಾಮಿ, ಅಣ್ಣಾ, ಮಾಸ್ತರ, ಗುರು ಎಂಬುದಾಗಿ ಆತ್ಮೀಯವಾಗಿ ಕರೆಯಲ್ಪಡುತ್ತಿದ್ದ ದಂಡಾವತಿಮಠರು ಸ್ನೇಹಜೀವಿಗಳು. ಎಂತಹವರನ್ನೂ ಗೆಲ್ಲಬಲ್ಲ, ಎಂತಹವರ ಎದೆಯ ಕಲುಷವನ್ನು ಕಳೆಯಬಲ್ಲ ನಿರ್ಮಲವಾದ ಹಾಲಿನಂತಹ ಹೃದಯ ಅವರದು. ಅವರು ಅಜಾತ ಶತ್ರುಗಳು. ಜೀವನವನ್ನು ಅದರ ನಿಜವಾದ ಬಣ್ಣ ದಲ್ಲಿ ಕಂಡ ಕಲಾವಿದರು. ಅಂತೆಯೇ ಅವರ ಜೀವನ ವಿಧಾನಕ್ಕೆ, ಆತ್ಮೀಯ ವಾದ ವ್ಯಕ್ತಿತ್ವಕ್ಕೆ ಮಾರುಹೋದ ಕಲಾವಿದ ಮಿತ್ರರು ಮನಸ್ಸು ಬಿಚ್ಚಿ ಹೊಗಳಿರುವುದನ್ನು ಕಾಣಬಹುದು.

ಮರಾಠಿ ಪತ್ರಿಕೆಗಳಲ್ಲಿ ದಂಡಾವತಿಮಠರ ಬಗ್ಗೆ ಲೇಖನ ಬರೆದು ಜನತೆಗೆ ಪರಿಚಯಿಸಿಕೊಟ್ಟ ಮಹಾರಾಷ್ಟ್ರದ ಕಲಾವಿದ ಗುರ್ಜರ ಅವರು "ಶ್ರೀ ಜಿ. ಎಸ್. ಅವರಂತಹ ಮನುಷ್ಯರನ್ನು ನಾನು ಇದುವರೆಗೆ ಕಂಡಿಲ್ಲ. ಮಾಸ್ತರರಂತಹ ದೊಡ್ಡ ಮನುಷ್ಯರು ಮತ್ತೊಬ್ಬರಿಲ್ಲ. ಯಾವ ಆಶೆ ಆಕಾಂಕ್ಷೆ ಗಳಿಗೂ ಮನ ಸೋತವರಲ್ಲ.......... ಇವರು ಶ್ರೇಷ್ಠ ಕಲಾವಿದರು, ಆದರ್ಶ ಶಿಕ್ಷಕರು. ಸರಳ ಸುಭಾವಿತ ಜೀವಿ" ಎನ್ನುತ್ತಾರೆ. ಹಿರಿಯ ಕಲಾವಿದರಾದ

ಎಂ. ವ್ಹಿ. ಮಿಣಜಗಿರಿಯವರು “ಅವರೊಬ್ಬರು ಪಾಪವರಿಯದ, ಪರಿಶುದ್ಧ ಜೀವಿ. ಬಹು ಸಂಭಾವಿತ. ಸದಾ ಹಸನ್ಮುಖಿದಿಂದ ಎಲ್ಲರೊಡನೆಯೂ ಸಖ್ಯದಿಂದ ಜೀವಿಸುವ ಅವರ ಕಲೆಯು ನನಗೂ ಬರಲಿಲ್ಲ” ಎನ್ನುತ್ತಾರೆ. ವಿಜಯ ಕಲಾಮಂದಿರದ ನಿರ್ದೇಶಕರೂ ರಾಜ್ಯ ಲಲಿತಕಲಾ ಅಕೆಡೆಮಿಯ ಅಧ್ಯಕ್ಷರೂ ಆದ ಟಿ.ಪಿ. ಅಕ್ಕಿಯವರು “....ಎಲ್ಲರೂ ಚೆನ್ನಾಗಿರಬೇಕು ಸುಖವಾಗಿರಬೇಕು ಎಂಬ ಅವರ ವಿಶಾಲಭಾವನೆ ಉಳಿದವರಿಗೆ ಬರುವುದು ಕಷ್ಟ” ಎನ್ನುತ್ತಾರೆ. ಒಬ್ಬ ಕಲಾವಿದನನ್ನು ಇನ್ನೊಬ್ಬ ಕಲಾವಿದ ಮೆಚ್ಚಿಕೊಳ್ಳುವುದು, ಅವನ ಬಗೆಗೆ ಮೆಚ್ಚಿಗೆಯ ಮಾತುಗಳನ್ನಾಡುವುದು ದುರ್ಲಭ. ಆದರೆ ದಂಡಾವತಿಮಠರ ಬಗೆಗೆ ಈ ಮಹನಿಯರುಗಳು ಆಡಿದ ಮಾತುಗಳೆಲ್ಲ ಅವರ ವ್ಯಕ್ತಿತ್ವಕ್ಕೆ ಸಲ್ಲಿಸಿದ ನುಡಿ ನಮನಗಳು. ಕಲಾವಿದ ಹಾಲಭಾವಿಯವರು ಬರೆದ “ನನ್ನ ಸಮಕಾಲೀನ ಕಲಾವಿದರು” ಎಂಬ ಕಿರು ಹೊತ್ತಿಗೆಯಲ್ಲಿ ದಂಡಾವತಿಮಠರ ಬಗೆಗೆ ಬರೆಯುತ್ತ “He is of a very high character and loved by one and all...........and desires to live his last days with brush and canvas'' ಎಂದ ಮಾತುಗಳು ಕಲಾವಿದ, ಕಲಾಗುರು, ಜೀವನ ಕಲಾವಿದ ದಂಡಾವತಿಮಠರ ಘನ ವ್ಯಕ್ತಿತ್ವವನ್ನು ಅವರ ಜೀವನದ ಪರಮಗುರಿಯನ್ನು ಚಿತ್ರಿಸುತ್ತವೆ.

“ಕುಂಚದ ಸ್ವಾತಂತ್ರ್ಯವೂ ಒಂದು ಪವಿತ್ರವಾದ ಸ್ವಾತಂತ್ರ್ಯವಾಗಿದೆ” ಎಂಬುದಾಗಿ ಕಲಾವಿದನ ಸ್ವಾತಂತ್ರ್ಯವನ್ನು ಸಾರಿ ಹೇಳಿದ ಜಿ. ಎಸ್. ದಂಡಾವತಿಮಠ ಅವರು ೧೯೭೮ನೆಯ ಇಸ್ವಿಯ ನವ್ಹಂಬರ್ ತಿಂಗಳ ೧೫ ರಂದು ಶಿವಾಧೀನರಾದರು. ಆಗ ಪಂಚಭೂತಗಳಿಂದ ಕೂಡಿದ್ದ ಅವರ ಶರೀರ ಅಳಿದಿರಬಹುದು. ಆದರೆ ಕಲಾವಿದರ ಪಾಲಿಗೆ, ಕಲಾ ಪ್ರಪಂಚದಲ್ಲಿ ಅವರು ಅಮೃತರು, ಅಮರರು, ಚಿರಸ್ಮರಣೀಯರು.

## ಸಹಾಯಕ ಗ್ರಂಥಗಳು :

1. ನಡೆದು ಬಂದ ದಾರಿ - ಸಂಪುಟ 3. ಮನೋಹರ ಗ್ರಂಥಮಾಲಾ ಧಾರವಾಡ.

2. My contmporary Artists- D.V. Halabhavi

3. Kalaguru Shri G. S. Dandavatimath Memorial Souvenir- S. C. Patil

4. ಜಿ.ಎಸ್. ದಂಡಾವತಿಮಠ- ವಿ. ಸಿ. ಮಾಲಗತ್ತಿ. ವೀ. ಅ. ಸಂಸ್ಥೆ ಜಗದ್ಗುರು ತೋಂಟದಾರ್ಯ ಸಂಸ್ಥಾನಮಠ, ಡಂಬಳ-ಗದಗ.

5. ಮತ್ತು ಸಂದರ್ಶನಗಳು.





ನೂತನ ಕಲಾಮಂದಿರದ ಒಂದು ದೃಶ್ಯ



ಶಿಕ್ಷಣದಲ್ಲಿ ತೊಡಗಿರುವ ಕಲಾಗುರು



ಸಾಹಿತಿದ್ವಯರ ಮಧ್ಯದಲ್ಲಿ ಕಲಾಗುರು



ಭಾವ ಚಿತ್ರ – ಹುಡಿವರ್ಣ



ಭಾವ ಚಿತ್ರ - ರೊದ್ದ ಶ್ರೀನಿವಾಸರಾಯರು



ಭಾವ ಚಿತ್ರ ಬಿಡಿಸುತ್ತಿರುವುದು



ರೇಖಾ ಚಿತ್ರ

